ಕರ್ನಾಟಕ ಸರ್ಕಾರ

**ಸಂ.ಕಂಇ 04 ಎಲ್‌ಆರ್‌ಡಿ 2021**

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿಗಳ ಕಟ್ಟಡ
ಬೆಂಗಳೂರು ದಿನಾಂಕ: 30.01.2021.

**ಇಂದ:**

ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,
ಕಂದಾಯ ಇಲಾಖೆ,
ಬೆಂಗಳೂರು.

**ಇವರಿಗೆ:**

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನಸಭೆ,
ವಿಧಾನಸೌಧ,
ಬೆಂಗಳೂರು.

Stamp 01
01/02/21

ಮಾನ್ಯರೇ,

**ವಿಷಯ:** ಮಾನ್ಯ ವಿಧಾನಸಭಾ ಸದಸ್ಯರಾದ ಡಾ|| ಅಜಯ್ ಧರ್ಮಸಿಂಗ್ (ಜೇವರ್ಗಿ) ರವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 302 ಕ್ಕೆ ಉತ್ತರಿಸುವ ಕುರಿತು.

***

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನಸಭಾ ಸದಸ್ಯರಾದ ಡಾ|| ಅಜಯ್ ಧರ್ಮಸಿಂಗ್ (ಜೇವರ್ಗಿ) ರವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 302 ಕ್ಕೆ ಸಂಬಂಧಿಸಿದಂತೆ ಉತ್ತರದ 350 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

Rajyashree V.T 30/1

**(ವಿ.ಟಿ.ರಾಜ್ಯಶ್ರೀ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ(ಭೂಮಾಪನ)

# ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 302 |
| ಸದಸ್ಯರ ಹೆಸರು | ಡಾ|| ಅಜಯ್ ಧರ್ಮಸಿಂಗ್ (ಜೇವರ್ಗಿ) |
| ಉತ್ತರಿಸಬೇಕಾದ ದಿನಾಂಕ | 01.02.2021 |
| ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಜೇವರ್ಗಿ ತಾಲ್ಲೂಕಿನ ಬಿಲ್ವಾರ ಗ್ರಾಮವನ್ನು ಹೋಬಳಿ ಕೇಂದ್ರವನ್ನಾಗಿ ಮಾಡಲು ಸರ್ಕಾರ ಆಲೋಚಿಸಿದೆಯೇ; | ಹಾಲಿ ಯಡ್ರಾಮಿ ತಾಲ್ಲೂಕಿನಲ್ಲಿರುವ ಬಿಲ್ವಾರ ಗ್ರಾಮವನ್ನು ಹೋಬಳಿ ಕೇಂದ್ರವನ್ನಾಗಿ ಘೋಷಿಸುವಂತೆ ಸರ್ಕಾರದಲ್ಲಿ ಕೋರಿಕೆ ಸ್ವೀಕೃತವಾಗಿರುತ್ತದೆ. |
| ಆ) | ಹಾಗಿದ್ದಲ್ಲಿ, ಸದರಿ ಗ್ರಾಮವನ್ನು ಹೋಬಳಿ ಕೇಂದ್ರವನ್ನಾಗಿ ಅಧಿಸೂಚನೆ ಹೊರಡಿಸಿದೆಯೇ; | ಇಲ್ಲಾ |
| ಇ) | ಹಾಗಿಲ್ಲದಿದ್ದಲ್ಲಿ, ಯಾವ ಕಾಲಮಿತಿಯಲ್ಲಿ ಸದರಿ ಗ್ರಾಮವನ್ನು ಹೋಬಳಿ ಕೇಂದ್ರವನ್ನಾಗಿ ಮಾಡಲು ಅಧಿಸೂಚನೆ ಹೊರಡಿಸಲಾಗುವುದು? | ಪ್ರಸ್ತಾವನೆಯನ್ನು ಪರಿಶೀಲಿಸಿ, ಇದರ ಬಗ್ಗೆ ಸೂಕ್ತ ಕ್ರಮ ಕೈಗೊಳ್ಳಲಾಗುತ್ತದೆ. |

**ಸಂಖ್ಯೆ: ಕಂಇ/04/ಎಲ್‌ಆರ್‌ಡಿ/2021**

**(ಆರ್.ಅಶೋಕ)**
ಕಂದಾಯ ಸಚಿವರು



ಕರ್ನಾಟಕ ಸರ್ಕಾರ

ಸಂಖ್ಯೆ: AGRI-ASC/6/2021

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ: 30.01.2021

**ಇವರಿಂದ**
ಸರ್ಕಾರದ ಅಪರ ಮುಖ್ಯಕಾರ್ಯದರ್ಶಿಗಳು,
ಕೃಷಿ ಇಲಾಖೆ, ಬಹುಮಹಡಿ ಕಟ್ಟಡ,
ಬೆಂಗಳೂರು.

02 Stad 01/2/2021

**ಇವರಿಗೆ**
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ವೆಂಕಟರಮಣಯ್ಯ ಟಿ. (ದೊಡ್ಡಬಳ್ಳಾಪುರ) ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ:276 ಕ್ಕೆ ಉತ್ತರಿಸುವ ಬಗ್ಗೆ.

ಉಲ್ಲೇಖ: ಸಂಖ್ಯೆ: ವಿಸಪ್ರಶಾ / 15ನೇವಿಸ / 9ಅ /ಚುಗು-ಚುರ.ಪ್ರಶ್ನೆ/276/2021, ದಿನಾಂಕ: 25.01.2021.

******

ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ವೆಂಕಟರಮಣಯ್ಯ ಟಿ. (ದೊಡ್ಡಬಳ್ಳಾಪುರ) ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ:276 ಕ್ಕೆ ಉತ್ತರದ ಪ್ರತಿಯನ್ನು e-mail ID: dsqb-kla-kar@nic.in ಗೆ ಮೇಲ್ ಕಳುಹಿಸಲಾಗಿದೆ. ಸದರಿ ಉತ್ತರದ 350 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಸೂಕ್ತ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

P. S... 30/1/2021

(ಪಿ.ಸತ್ಯಭಾಮ)
ಸರ್ಕಾರದ ಅಧೀನ ಕಾರ್ಯದರ್ಶಿ
ಕೃಷಿ ಇಲಾಖೆ (ಯೋಜನೆ)

## ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆಸಂಖ್ಯೆ | : | 276 |
| ಮಾನ್ಯ ವಿಧಾನ ಸಭಾ ಸದಸ್ಯರ ಹೆಸರು | : | ಶ್ರೀ ವೆಂಕಟರಮಣಯ್ಯ ಟಿ.(ದೊಡ್ಡಬಳ್ಳಾಪುರ) |
| ಉತ್ತರಿಸುವ ದಿನಾಂಕ | : | 01-02-2021 |
| ಉತ್ತರಿಸುವ ಮಾನ್ಯ ಸಚಿವರು | : | ಕೃಷಿ ಸಚಿವರು |

<table>
<tr><th>ಕ್ರ.ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>2019-20 ಹಾಗೂ 2020-21 ನೇ ಸಾಲಿನಲ್ಲಿ ದೊಡ್ಡಬಳ್ಳಾಪುರ ತಾಲ್ಲೂಕಿನಲ್ಲಿ ಸಾಮಾನ್ಯ, ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದ ಎಷ್ಟು ರೈತ ಫಲಾನುಭವಿಗಳಿಗೆ ಟ್ರಾಕ್ಟರ್ ಮತ್ತು ಮಿನಿ ಟ್ರಾಕ್ಟರ್ ವಾಹನಗಳನ್ನು ವಿತರಿಸಲಾಗಿದೆ;</td><td>2019-20 ಹಾಗೂ 2020-21ನೇ ಸಾಲಿನಲ್ಲಿ ದೊಡ್ಡಬಳ್ಳಾಪುರ ತಾಲ್ಲೂಕಿನಲ್ಲಿ ಸಾಮಾನ್ಯ, ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದ ರೈತರಿಗೆ ವಿತರಿಸಲಾದ ಮಿನಿ ಟ್ರಾಕ್ಟರ್ ವಾಹನಗಳ ವಿವರಗಳು ಈ ಕೆಳಕಂಡಂತಿರುತ್ತವೆ:<br>(ಭೌತಿಕ- ಸಂಖ್ಯೆಗಳಲ್ಲಿ)
<table>
<tr><th>ಕ್ರ.ಸಂ</th><th>ಆರ್ಥಿಕ ವರ್ಷ</th><th>ಸಾಮಾನ್ಯ</th><th>ಪರಿಶಿಷ್ಟ ಜಾತಿ</th><th>ಪರಿಶಿಷ್ಟ ಪಂಗಡ</th></tr>
<tr><td>1</td><td>2019-20</td><td>42</td><td>17</td><td>5</td></tr>
<tr><td>2</td><td>2020-21</td><td>20</td><td>7</td><td>4</td></tr>
</table>
The details of the Mini Tractors issued to General, Schedule Caste and Scheduled Tribe Farmers during the financial year 2019-20 and 2020-21 in Doddaballapur Taluk are as below:<br>(Physical-in numbers)
<table>
<tr><th>Sl No</th><th>Financial Year</th><th>General</th><th>Schedule Caste</th><th>Scheduled Tribe</th></tr>
<tr><td>1</td><td>2019-20</td><td>42</td><td>17</td><td>5</td></tr>
<tr><td>2</td><td>2020-21</td><td>20</td><td>7</td><td>4</td></tr>
</table>
</td></tr>
</table>

<table>
<tr>
<td>ಆ)</td>
<td>ವಾಹನಗಳನ್ನು ನೀಡಬೇಕಾಗಿರುವ ರೈತ ಫಲಾನುಭವಿಗಳೆಷ್ಟು: (ವಿವರ ನೀಡುವುದು)</td>
<td>
2020-21ನೇ ಸಾಲಿನಲ್ಲಿ ಈ ಕೆಳಕಂಡಂತೆ ವರ್ಗವಾರು ಅರ್ಜಿಗಳು ಬಾಕಿ ಇರುತ್ತದೆ.<br>
(ಭೌತಿಕ- ಸಂಖ್ಯೆಗಳಲ್ಲಿ)
<table>
<tr><th>ಕ್ರ.ಸಂ</th><th>ಸಾಮಾನ್ಯ</th><th>ಪರಿಶಿಷ್ಟ ಜಾತಿ</th><th>ಪರಿಶಿಷ್ಟ ಪಂಗಡ</th></tr>
<tr><td>1</td><td>16</td><td>154</td><td>34</td></tr>
</table>
The details of Category wise applications pending are as below for the year 2020-21:<br>
(Phy:Nos.)
<table>
<tr><th>Sl No</th><th>General</th><th>Schedule Caste</th><th>Scheduled Tribe</th></tr>
<tr><td>1</td><td>16</td><td>154</td><td>34</td></tr>
</table>
</td>
</tr>
<tr>
<td>ಇ)</td>
<td>ಬಾಕಿ ವಾಹನಗಳನ್ನು ನೀಡಲು ಸರ್ಕಾರವು ಕೈಗೊಂಡಿರುವ ಕ್ರಮಗಳೇನು?</td>
<td>
ಪ್ರಸಕ್ತ ಸಾಲಿಗೆ ವಿವಿಧ ಸಹಾಯಧನ ಯೋಜನೆಗಳಡಿ ನಿಗದಿಪಡಿಸಲಾಗಿರುವ ಕ್ರಿಯಾ ಯೋಜನೆಯನ್ವಯ ಮಿನಿ ಟ್ರಾಕ್ಟರ್ ವಾಹನಗಳನ್ನು ವಿತರಿಸಲಾಗಿರುತ್ತದೆ. ಕೇಂದ್ರ ಪುರಸ್ಕೃತ ಎಸ್.ಎಂ.ಎ.ಎಂ. ಯೋಜನೆಯಡಿ ಎರಡನೇ ಕಂತಿನ ಅನುದಾನವನ್ನು ಕೇಂದ್ರ ಸರ್ಕಾರವು ಬಿಡುಗಡೆಗೊಳಿಸಿದ್ದು, ಮುಂದಿನ ದಿನಗಳಲ್ಲಿ ಹೆಚ್ಚಿನ ಫಲಾನುಭವಿಗಳಿಗೆ ಮಿನಿ ಟ್ರಾಕ್ಟರ್ ವಾಹನಗಳನ್ನು ಅನುಮೋದಿತ ಕ್ರಿಯಾ ಯೋಜನೆಯನ್ವಯ ವಿತರಿಸಲು ಕ್ರಮ ಕೈಗೊಳ್ಳಲಾಗಿದೆ.<br><br>
For the current financial year, as per the allocated Action Plan under various subsidy schemes Mini Tractors vehicles have already been distributed. Under Centrally Sponsored SMAM scheme, 2nd instalment grant has been released by Government of India and action has been taken to distribute mini tractors to more number of beneficiaries as per the approved action plan.
</td>
</tr>
</table>

ಸಂಖ್ಯೆ: AGRI-ASC/6/2021

(ಬಿ.ಸಿ. ಪಾಟೀಲ್)
ಕೃಷಿ ಸಚಿವರು



# ಕರ್ನಾಟಕ ಸರ್ಕಾರ

ಸಂಖ್ಯೆ:ಪಸಂಮೀ ಇ-28 ಮೀಇಯೋ 2021 ಕರ್ನಾಟಕ ಸರ್ಕಾರದ ಸಚಿವಾಲಯ
ವಿಕಾಸಸೌಧ,
ಬೆಂಗಳೂರು, ದಿನಾಂಕ: 30-01-2021

ಇವರಿಂದ,
ಸರ್ಕಾರದ ಅಪರ ಮುಖ್ಯಕಾರ್ಯದರ್ಶಿ,
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ,
ವಿಕಾಸಸೌಧ,
**ಬೆಂಗಳೂರು.**

3
01/02/2021

ಇವರಿಗೆ
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನಸಭೆ ಸಚಿವಾಲಯ,
ವಿಧಾನಸೌಧ,
**ಬೆಂಗಳೂರು-1.**

ಮಾನ್ಯರೆ,

ವಿಷಯ:- ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಉಮಾನಾಥ ಎ.ಕೋಟ್ಯಾನ್ (ಮೂಡಬಿದ್ರೆ) ರವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 265 ಕ್ಕೆ ಉತ್ತರ ಒದಗಿಸುವ ಬಗ್ಗೆ.

******

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಉಮಾನಾಥ ಎ.ಕೋಟ್ಯಾನ್ (ಮೂಡಬಿದ್ರೆ)ರವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 265 ಕ್ಕೆ ಸಂಬಂಧಿಸಿದ ಕನ್ನಡ ಭಾಷೆಯ ಉತ್ತರದ 350 ಹಾಗೂ ಆಂಗ್ಲ ಭಾಷೆಯ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ತಮಗೆ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ

Kamakshi U.A. 30/1/21
(ಕಾಮಾಕ್ಷಿ ಯು.ಎ.)
ಸರ್ಕಾರದ ಅಧೀನ ಕಾರ್ಯದರ್ಶಿ
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ
(ಮೀನುಗಾರಿಕೆ)

30/01/21

03 Start 01/02/2021

# ಕರ್ನಾಟಕ ವಿಧಾನಸಭೆ

| | | |
|---|---|---|
| 1) | ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 265 |
| 2) | ಸದಸ್ಯರ ಹೆಸರು | ಶ್ರೀ ಉಮಾನಾಥ ಎ.ಕೋಟ್ಯಾನ್ (ಮೂಡಬಿದ್ರೆ) |
| 3) | ಉತ್ತರಿಸಬೇಕಾದ ದಿನಾಂಕ | 01-02-2021 |
| 4) | ಉತ್ತರಿಸಬೇಕಾದ ಸಚಿವರು | ಮಾನ್ಯ ಮೀನುಗಾರಿಕೆ ಹಾಗೂ ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು |

| | ಪ್ರಶ್ನೆ | ಉತ್ತರ |
|---|---|---|
| ಅ) | ಮೀನುಗಾರಿಕಾ ವಲಯವನ್ನು ಅಭಿವೃದ್ಧಿಗೊಳಿಸುವ ಹಾಗೂ ಮತ್ಸ್ಯಾಹಾರವನ್ನು ಜನಪ್ರಿಯಗೊಳಿಸಲು ಮೀನುಗಾರಿಕೆ ಅಭಿವೃದ್ಧಿ ನಿಗಮವು ಹಮ್ಮಿಕೊಂಡಿರುವ ಕ್ರಿಯಾ ಯೋಜನೆಗಳು ಯಾವುವು; | ಮೀನುಗಾರಿಕೆ ವಲಯವನ್ನು ಅಭಿವೃದ್ಧಿಗೊಳಿಸುವ ಹಾಗೂ ಮತ್ಸ್ಯಾಹಾರವನ್ನು ಜನಪ್ರಿಯಗೊಳಿಸಲು ಮೀನುಗಾರಿಕೆ ಅಭಿವೃದ್ಧಿ ನಿಗಮವು ಹಮ್ಮಿಕೊಂಡಿರುವ ಯೋಜನೆಗಳು ಈ ಕೆಳಗಿನಂತಿದೆ:-<br><br>1) ನಿಗಮವು ರಾಜ್ಯದ ಮೀನುಗಾರಿಕೆ ಬಂದರುಗಳಲ್ಲಿ ಒಟ್ಟು ದಿನವೊಂದಕ್ಕೆ 220 ಟನ್ ಸಾಮರ್ಥ್ಯದ ಮಂಜುಗಡ್ಡೆ ಸ್ಥಾವರಗಳನ್ನು ನಿರ್ಮಿಸಿ ಮೀನುಗಾರಿಕೆಗೆ ಮಂಜುಗಡ್ಡೆಯನ್ನು ಸರಬರಾಜು ಮಾಡಲಾಗುತ್ತಿದೆ.<br><br>2) ನಿಗಮವು ರಾಜ್ಯದ ಮೀನುಗಾರಿಕೆ ಬಂದರುಗಳಲ್ಲಿ ಡೀಸೆಲ್ ಬಂಕುಗಳನ್ನು ನಿರ್ಮಿಸಿ ಮೀನುಗಾರಿಕೆ ಬೋಟುಗಳಿಗೆ ಡೀಸೆಲನ್ನು ಸರಬರಾಜು ಮಾಡಲಾಗುತ್ತಿದೆ.<br><br>3) ನಿಗಮವು ಉತ್ತರ ಕನ್ನಡ ಜಿಲ್ಲೆಯ ಭಟ್ಕಳ, ಹೊನ್ನಾವರ ಹಾಗೂ ತದಡಿ ಮೀನುಗಾರಿಕೆ ಬಂದರಿನಲ್ಲಿ ಪರ್ಸೀನ್ ಬೋಟುಗಳು ಹಿಡಿದು ತಂದ ಮೀನನ್ನು ನಿಗಮದ ಮುಖಾಂತರ ಮಾರಾಟ ಮಾಡಿ ಮೀನುಗಾರರಿಗೆ ಉತ್ತಮ ಬೆಲೆಯನ್ನು ನೀಡಲು ಕ್ರಮವಹಿಸಲಾಗುತ್ತಿದೆ.<br><br>4) ನಿಗಮವು ರಾಜ್ಯದ ಒಳನಾಡು ಪ್ರದೇಶಕ್ಕೆ ತಾಜಾ ಹಾಗೂ ಶೀಥಲೀಕೃತ ಮೀನು ಸರಬರಾಜು ಮಾಡಲು ಶೀಥಲ ಸರಪಣಿಯನ್ನು ಸ್ಥಾಪಿಸಿದೆ.<br><br>5) ನಿಗಮವು ರಾಜ್ಯದಲ್ಲಿ ಒಟ್ಟು 21 ಹವಾನಿಯಂತ್ರಿತ ಮೀನು ಮಾರಾಟ ಮಳಿಗೆ ಮತ್ಸ್ಯದರ್ಶಿನಿ ಉಪಾಹಾರ ಗೃಹಗಳನ್ನು ಸ್ಥಾಪಿಸಿ ಸಾರ್ವಜನಿಕರಿಗೆ ಉತ್ತಮ ಗುಣಮಟ್ಟದ ಮೀನು ಹಾಗೂ ಮೀನಿನ ಉತ್ಪನ್ನಗಳನ್ನು ಸರಬರಾಜು ಮಾಡುತ್ತಿದೆ.<br><br>6) ನಿಗಮವು ಮಂಗಳೂರಿನಲ್ಲಿ ಯೂರೋಪಿಯನ್ ಒಕ್ಕೂಟ ರಾಷ್ಟ್ರಗಳಿಗೆ ಮೀನು ರಫ್ತು ಮಾಡುವ ಪರವಾನಿಗೆ ಹೊಂದಿರುವ ಆಧುನಿಕ ಮೀನು ಸಂಸ್ಕರಣಾ ಸ್ಥಾವರವನ್ನು ನಿರ್ಮಿಸಿದೆ.<br><br>7) ನಿಗಮವು ಮಂಗಳೂರಿನಲ್ಲಿ ತಾಜಾ ಮೀನನ್ನು ಅರಬ್ ದೇಶಗಳಿಗೆ ರಫ್ತು ಮಾಡುವ ಚಿಲ್ಡ್ ಫಿಶ್ ಸಂಸ್ಕರಣಾ ಘಟಕವನ್ನು ನಿರ್ಮಿಸಿದೆ. |

| | | |
|---|---|---|
| | | 8) ನಿಗಮದಿಂದ ಅಲಂಕಾರಿಕಾ ಮೀನುಗಳ ಮಾರಾಟ ಮತ್ತು ಇದಕ್ಕೆ ಸಂಬಂಧಪಟ್ಟ ಸಲಕರಣೆಗಳನ್ನು ಮಾರಾಟ ಮಾಡಲಾಗುತ್ತಿದೆ.<br><br>9) ನಿಗಮದಿಂದ ಮೀನು ಆಹಾರ ಮತ್ತು ಮೀನೆಣ್ಣೆ ಮತ್ತು ಮೀನು ಸಂಸ್ಕರಣಕ್ಕೆ ಬೇಕಾದ ಸೌಲಭ್ಯಗಳನ್ನು ಒದಗಿಸಲಾಗುತ್ತಿದೆ.<br><br>10) ಮೀನುಗಾರಿಕೆ ಇಲಾಖೆಯ ಮತ್ಸ್ಯಾಶ್ರಯ ಯೋಜನೆ, ಸುಸಜ್ಜಿತ ಮೀನು ಮಾರುಕಟ್ಟೆಗಳ ನಿರ್ಮಾಣ ಮತ್ತು ಇತರೆ ಯೋಜನೆಗಳನ್ನು ನಿಗಮದ ಮುಖಾಂತರ ಅನುಷ್ಠಾನಗೊಳಿಸಲಾಗುತ್ತಿದೆ.<br><br>11) ಮೀನುಗಾರಿಕೆ ಇಲಾಖೆಯ ಮತ್ಸ್ಯ ಜೋಪಾಸನೆ ಯೋಜನೆಯಡಿ ರಾಜ್ಯದ 20 ಮೀನು ಮಾರುಕಟ್ಟೆ ಸ್ಥಳಗಳಲ್ಲಿ 2 ಟನ್ ಸಾಮರ್ಥ್ಯದ ಶೀಥಲೀಕರಣ ಘಟಕ ನಿರ್ಮಾಣವನ್ನು ನಿಗಮದಿಂದ ಕೈಗೊಳ್ಳಲಾಗಿದೆ.<br><br>12) ರಾಷ್ಟ್ರೀಯ ಕೃಷಿ ವಿಕಾಸ ಯೋಜನೆ / ನಬಾರ್ಡ್ ಆರ್ಐಡಿಎಫ್ ಯೋಜನೆ / ಎನ್ಎಫ್‌ಡಿಬಿ ಯೋಜನೆ / ರಾಜ್ಯ ಸರಕಾರದ ಯೋಜನೆಯಡಿ ನಿಗಮದಿಂದ ಸುಸಜ್ಜಿತ ಮೀನು ಮಾರುಕಟ್ಟೆಗಳ ನಿರ್ಮಾಣ.<br><br>13) ತದಡಿ ಮೀನುಗಾರಿಕಾ ಬಂದರಿನಲ್ಲಿ ಐರೋಪ್ಯ ಒಕ್ಕೂಟ ರಾಷ್ಟ್ರಗಳಿಗೆ ಮೀನು ರಫ್ತು ಮಾಡುವ ಪರವಾನಿಗೆ ಹೊಂದಿರುವ ಸಮುದ್ರೋತ್ಪನ್ನ ರಫ್ತು ಸಂಸ್ಕರಣಾ ಘಟಕ ನಿರ್ಮಾಣ ಮಾಡಲಾಗಿದ್ದು ಸದ್ಯದಲ್ಲೇ ಕಾರ್ಯಾರಂಭ ಮಾಡಲಿದೆ.<br><br>14) ಮೀನುಗಾರಿಕೆ ಇಲಾಖೆಯ ಅನುದಾನದಡಿ ಮಂಗಳೂರು ಮತ್ತು ಮಲ್ಪೆ ಮೀನುಗಾರಿಕೆ ಬಂದರಿನಲ್ಲಿ ತಲಾ ಒಂದು ತೇಲುವ ಜೆಟ್ಟಿ ನಿರ್ಮಾಣ ಯೋಜನೆಯನ್ನು ನಿಗಮದ ಮುಖಾಂತರ ಅನುಷ್ಠಾನಗೊಳಿಸಲು ಕ್ರಮವಹಿಸಲಾಗಿದೆ. |
| ಆ) | ಕಳೆದ ಮೂರು ವರ್ಷಗಳಲ್ಲಿ ಎಷ್ಟು ಜನ ಫಲಾನುಭವಿಗಳಿಗೆ ನಿಗಮದ ಯೋಜನೆಯ ಸೌಲಭ್ಯಗಳನ್ನು ನೀಡಿ ಪ್ರೋತ್ಸಾಹಿಸಲಾಗಿದೆ; | ಕಳೆದ ಮೂರು ವರ್ಷಗಳಲ್ಲಿ ನಿಗಮವು ಕೆಳಕಂಡ ಯೋಜನೆಗಳಡಿ ಫಲಾನುಭವಿಗಳಿಗೆ ಸೌಲಭ್ಯಗಳನ್ನು ನೀಡಿ ಪ್ರೋತ್ಸಾಹಿಸಿದೆ:-<br><br>1. ರಾಜ್ಯ ಸರ್ಕಾರವು ಮತ್ಸ್ಯಾಶ್ರಯ ಯೋಜನೆಯನ್ನು ಅನುಷ್ಠಾನಗೊಳಿಸಲು ನಿಗಮವನ್ನು ನೋಡಲ್ ಏಜನ್ಸಿಯಾಗಿ ನೇಮಿಸಿದ್ದು, ಕಳೆದ ಮೂರು ವರ್ಷಗಳಲ್ಲಿ 4470 ಮತ್ಸ್ಯಾಶ್ರಯ ಮನೆಗಳನ್ನು ಫಲಾನುಭವಿಗಳಿಗೆ ಹಸ್ತಾಂತರಿಸಲಾಗಿದೆ.<br><br>2. ನಿಗಮದಿಂದ ಏಜೆನ್ಸಿ ಪಡೆದು ಮೀನು ಮಾರಾಟ ಮಳಿಗೆಗಳನ್ನು ನಡೆಸಲು 31 ಜನರಿಗೆ ಅವಕಾಶ ಮಾಡಿಕೊಡಲಾಗಿದೆ. |

| | | |
|---|---|---|
| | | 3. ನಿಗಮದಿಂದ ಲೈಸೆನ್ಸ್ ಪಡೆದು ಮೀನು ಮಾರಾಟ ಮಳಿಗೆ / ಮತ್ಸ್ಯದರ್ಶಿನಿ ಉಪಹಾರ ಮಳಿಗೆಗಳನ್ನು ನಡೆಸಲು 11 ಜನರಿಗೆ ಅವಕಾಶ ಕಲ್ಪಿಸಿದೆ.<br><br>4. ನಿಗಮದ ವತಿಯಿಂದ ರಾಜ್ಯದ ವಿವಿಧ ಜಾಗದಲ್ಲಿ ಮೀನಿನ ಊಟ, ಮೀನಿನ ಖಾದ್ಯ ಪದಾರ್ಥಗಳನ್ನು ತಯಾರಿಸಿ ಗ್ರಾಹಕರಿಗೆ ಕೈಗೆಟುಕುವ ದರದಲ್ಲಿ ಪೂರೈಸಲಾಗುತ್ತಿದೆ. |
| ಇ) | ಮಹಾನಗರ ಪ್ರದೇಶಗಳಲ್ಲಿ ಜನಪ್ರಿಯತೆಯನ್ನು ಗಳಿಸಿಕೊಂಡಿರುವ ನಿಗಮದ ಮತ್ಸ್ಯದರ್ಶಿನಿ ಹೋಟೆಲ್‌ಗಳನ್ನು ಬೇಡಿಕೆ ಇರುವ ಜಿಲ್ಲಾ ಕೇಂದ್ರಗಳಲ್ಲಿ ಪ್ರಾರಂಭಿಸುವ ಕುರಿತು ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ನಿಗಮದ ಮುಖಾಂತರ ರಾಜ್ಯದ 11 ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಹವಾನಿಯಂತ್ರಿತ ಮತ್ಸ್ಯದರ್ಶಿನಿ ಮಳಿಗೆಯನ್ನು ತಲಾ ರೂ.125.00 ಲಕ್ಷಗಳ (ಒಂದು ಮತ್ಸ್ಯದರ್ಶಿನಿಗೆ) ವೆಚ್ಚದಂತೆ ಒಟ್ಟು ರೂ.1375.00 ಲಕ್ಷ ವೆಚ್ಚದಲ್ಲಿ ನಿರ್ಮಿಸುವ ಬಗ್ಗೆ ಯೋಜನೆಯನ್ನು ಹಮ್ಮಿಕೊಂಡಿದ್ದು, ಯೋಜನೆಗೆ ಅನುದಾನ ದೊರೆತ ಕೂಡಲೇ ಬೇಡಿಕೆ ಇರುವ ಜಿಲ್ಲಾ ಕೇಂದ್ರಗಳಲ್ಲಿ ಪ್ರಾರಂಭಿಸಲು ಕ್ರಮವಹಿಸಲಾಗುವುದು. |
| ಈ) | ಹಾಗಿದ್ದಲ್ಲಿ, ನಿಗಮದ ಮೂಲಕ ಮತ್ಸ್ಯೋತ್ಪನ್ನಗಳನ್ನು ಜನಪ್ರಿಯಗೊಳಿಸುವ ಹಾಗೂ ಆಸಕ್ತರಿಗೆ ಉದ್ಯೋಗ ಕಲ್ಪಿಸಿಕೊಡುವಲ್ಲಿ ನೆರವಾಗುವ ಸರಳ ಯೋಜನೆಗಳಾವುವು? (ವಿವರ ನೀಡುವುದು) | ನಿಗಮದ ವತಿಯಿಂದ ಸ್ಥಾಪಿಸಲಾಗಿರುವ ಮತ್ಸ್ಯ ದರ್ಶಿನಿ ಮೀನು ಉಪಹಾರ ಗೃಹಗಳನ್ನು ನಿಗಮದ ಅನುದಾನದ ಲಭ್ಯತೆ ಮತ್ತು ಅನುದಾನದ ಲಭ್ಯತೆಯನ್ನಾಧರಿಸಿ ರಾಜ್ಯದ ಬೇರೆ ಬೇರೆ ಸ್ಥಳಗಳಲ್ಲಿ ಬೇಡಿಕೆಗನುಗುಣವಾಗಿ ಪ್ರಾರಂಭಿಸಲಾಗುವುದು.<br><br>ಆಸಕ್ತ 31 ಜನರಿಗೆ ನಿಗಮದ ಮುಖಾಂತರ ಏಜೆನ್ಸಿ ರೂಪದಲ್ಲಿ ಮತ್ಸ್ಯದರ್ಶಿನಿ ಮಳಿಗೆಗಳನ್ನು ನಡೆಸಲು ಅನುಮತಿ ನೀಡಲಾಗಿದೆ.<br><br>ಹೆಚ್ಚಿನ ಸಂಖ್ಯೆಯಲ್ಲಿ ಮತ್ಸ್ಯದರ್ಶಿನಿ ಮಳಿಗೆಗಳನ್ನು ಸ್ಥಾಪಿಸಲು ಜಾಗೃತಿ ಮೂಡಿಸಲಾಗುತ್ತಿದ್ದು, ಆಸಕ್ತಿ ತೋರಿಸಿ ಮುಂದೆ ಬಂದವರಿಗೆ ಮತ್ಸ್ಯದರ್ಶಿನಿ ಮಳಿಗೆಗಳನ್ನು ಏಜೆನ್ಸಿ ರೂಪದಲ್ಲಿ ಸ್ಥಾಪಿಸಲು ಅನುಮತಿ ನೀಡಲಾಗುವುದು. |

ಸಂಖ್ಯೆ: ಪಸಂಮೀ ಇ-28 ಮೀಇಯೋ 2021

(ಎಸ್. ಅಂಗಾರ)
ಮೀನುಗಾರಿಕೆ ಹಾಗೂ
ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು

# KARNATAKA LEGISLATIVE ASSEMBLY

1) Starred LA Question No : 265
2) Name of the Member : Sri Mr. Umanath A. Kotyan
3) Date of Reply : 01-02-2021
4) To be replied by : Fisheries, Ports and Inland Water Transport Minister

| | Question | Answer |
|---|---|---|
| A | What are the action plans taken by the Fisheries Development Corporation to develop the fisheries sector and popularise seafood in the State; | The schemes of the Fisheries Development Corporation to develop the fisheries sector and popularize the fishing sector are as follows:<br><br>1. The Corporation is supplying ice to fishing harbours of the State, approximately 220 tons of ice per day.<br><br>2. The Corporation has established diesel bunkers in the fishing harbours of the State and supply diesel to fishing boats.<br><br>3) The Corporation is also taking steps to sell the fish brought by purse-seine boats in Bhatkal, Honnavar and Tadadi fishing harbours in UttaraKannada district to ensure better price to the fishermen.<br><br>4) The Corporation has established a cold chain system to supply fresh fish to the inland areas of the State.<br><br>5. The Corporation has established 21 Air Conditioned Mastya Darshini Fish Stalls in the State and supplies high quality fish and fish products to the public.<br><br>6. The Corporation has constructed a modern fish processing plant in Mangalore with a licence for export of fish to European Union countries.<br><br>7) The Corporation has established a chilled fish processing plant in Mangalore which exports fresh fish to Arab countries.<br><br>8) Sale of ornamental fish essence and Aquarium accessories is taken up by the Corporation. |

| | | |
|---|---|---|
| | | 9) The Corporation is providing facilities for sale of seafood and processing of fish by-products.<br><br>10. Department Scheme like Mathsashraya, construction of well-equipped fish markets are being implemented through the Corporation.<br><br>11. Construction of Corporation assisted 2 Tonne capacity cold storages at selected 20 Fish Market Places in the State.<br><br>12) Construction of well-equipped fish markets by the Corporation under National Agricultural Development Scheme/ NABARD RIDF Scheme/ NFDB Scheme/ State Government Scheme.<br><br>13) A marine export processing plant for export of fish to European Union countries at Tadadi fishing harbour has been constructed and will be commissioned shortly .<br><br>14) Action has been taken to implement floating jetty Project one each at Mangalore and Malpe Fishing Harbour under the financial assistance of the department. |
| B. | How many beneficiaries have been encouraged by providing facilities by the Corporation in the last three years; | 1. The State Government has appointed the Corporation as nodal agency for implementation of Matsyashraya Scheme and 4470 houses have been already handed over to the beneficiaries in the last three years.<br><br>2. 31 private persons have been allowed to run fish outlets by obtaining agency from the Corporation.<br><br>3. Fish stalls have been licensed by the Corporation and 11 persons are allowed to run fish retail outlets.<br><br>4. Fish food items are manufactured at various places in the State by the Corporation and supplied to the customers at affordable rates. |

| | | |
|---|---|---|
| C. | Is there a proposal before the Government to start the corporation's popular matsyadarshini hotels in the district headquarters based on the demand in the metropolitan areas; | The corporation has proposed to construct a state-of-the-art air conditioned fish stalls in 11 Corporation limits of the State at a cost of Rs.125.00 lakhs (per stall), at a total cost of Rs.1375.00lakhs. Action will be taken to construct at the district headquarters as soon as the funds are received. |
| D. | If so, what are the schemes through the Corporation that will help popularize fisheries products and help in providing employment to the interested people? (furnish details) | Fish restaurants by the Corporation will start functioning at different places of the State with availability of funds and Government grants.<br><br>31 interested entrepreneurs have been permitted to run fish shops through the Corporation as an agency.<br><br>Awareness campaign is being carried out to set up fish stales for the people who are interested in taking up fish sales activities. |

No. AHF E-28 SFS 2021

29/1/2021

(S. ANGARA)
Minister for Fisheries,
Ports and Inland Water Transport



# ಕರ್ನಾಟಕ ಸರ್ಕಾರ

ಸಂ:ಬಿಸಿಡಬ್ಲ್ಯೂ 62 ಬಿಎಂಎಸ್ 2021

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ: 30.01.2021

ಇವರಿಂದ:

ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ,
ವಿಕಾಸಸೌಧ,
ಬೆಂಗಳೂರು.

04
Stard
01/2/2021

ಇವರಿಗೆ:

ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ/ಪರಿಷತ್ತು,
ವಿಧಾನಸೌಧ,
ಬೆಂಗಳೂರು.

ಮಾನ್ಯರೇ,

ವಿಷಯ: ಮಾನ್ಯ ವಿಧಾನ ಸಭೆ/ಪರಿಷತ್ತಿನ ಸದಸ್ಯರಾದ ಶ್ರೀ/ಶ್ರೀಮತಿ ---ಶ್ರೀನಿವಾಸ್ ವಿ.ಎ. (ಪುತ್ತೂರು)--- ಇವರ ಚುಕ್ಕೆ ಗುರುತಿನ/ಗುರುತಿಲ್ಲದ ಪ್ರ.ಸಂ.--611----ಕ್ಕೆ ಉತ್ತರಿಸುವ ಕುರಿತು.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಮಾನ್ಯ ವಿಧಾನ ಸಭೆ/ಪರಿಷತ್ತಿನ ಸದಸ್ಯರಾದ ಶ್ರೀ/ಶ್ರೀಮತಿ ---ಶ್ರೀನಿವಾಸ್ ವಿ.ಎ. (ಪುತ್ತೂರು)--- ಇವರ ಚುಕ್ಕೆ ಗುರುತಿನ/ಗುರುತಿಲ್ಲದ ಪ್ರ.ಸಂ.611---ಕ್ಕೆ ಸಂಬಂಧಿಸಿದಂತೆ ಉತ್ತರದ 350 ಪ್ರತಿಗಳನ್ನು ಈ ಪತ್ರದೊಂದಿಗೆ ಲಗತ್ತಿಸಿ ಮುಂದಿನ ಅಗತ್ಯ ಕ್ರಮಕ್ಕಾಗಿ ಕಳುಹಿಸಿಕೊಡಲಾಗಿದೆ.

ತಮ್ಮ ನಂಬುಗೆಯ,

Shaheenparveen

(ಷಾಹೀನ್ ಪರ್ವೀನ್ ಕೆ.)
ಸರ್ಕಾರದ ಅಧೀನ ಕಾರ್ಯದರ್ಶಿ-2
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 611 |
| ಮಾನ್ಯ ಸದಸ್ಯರ ಹೆಸರು | ಶ್ರೀ ಶ್ರೀನಿವಾಸ್ ಎಂ. (ಮಂಡ್ಯ) |
| ಉತ್ತರಿಸಬೇಕಾದ ದಿನಾಂಕ | 01.02.2021 |
| ಉತ್ತರಿಸುವ ಸಚಿವರು | ಮಾನ್ಯ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಮಂಡ್ಯ ವಿಧಾನಸಭಾ ಕ್ಷೇತ್ರದಲ್ಲಿ ವಿದ್ಯಾರ್ಥಿನಿಯರ ವಸತಿ ನಿಲಯಗಳ ಕೊರತೆಯ ಸಂಬಂಧ ಅನೇಕ ಬಾರಿ ಮನವಿಗಳನ್ನು ಸಲ್ಲಿಸಿರು ವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು.<br>ಪ್ರಸ್ತುತ, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖಾ ವತಿಯಿಂದ ಮಂಡ್ಯ ಜಿಲ್ಲೆಯಲ್ಲಿ 65 ಮೆಟ್ರಿಕ್-ಪೂರ್ವ ಹಾಗೂ 44 ಮೆಟ್ರಿಕ್-ನಂತರದ ಹೀಗೆ ಒಟ್ಟು 109 ವಿದ್ಯಾರ್ಥಿನಿಲಯಗಳು ಕಾರ್ಯನಿರ್ವಹಿಸುತ್ತಿದ್ದು, ಕ್ರಮವಾಗಿ 3475 ಮತ್ತು 4990 ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶದ ಸೌಲಭ್ಯವನ್ನು ಕಲ್ಪಿಸಲಾಗಿರುತ್ತದೆ.<br>ಮುಂದುವರೆದು, ಮಂಡ್ಯ ವಿಧಾನಸಭಾ ಕ್ಷೇತ್ರದಲ್ಲಿ 2 ಮೆಟ್ರಿಕ್-ಪೂರ್ವ ಹಾಗೂ 6 ಮೆಟ್ರಿಕ್-ನಂತರದ ಬಾಲಕಿಯರ ವಿದ್ಯಾರ್ಥಿನಿಲಯಗಳು ಕಾರ್ಯನಿರ್ವಹಿಸುತ್ತಿದ್ದು, ಈ ವಿದ್ಯಾರ್ಥಿನಿಲಯಗಳಲ್ಲಿ ಒಟ್ಟು 775 ವಿದ್ಯಾರ್ಥಿನಿಯರಿಗೆ ಮಂಜೂರಾತಿ ಸೌಲಭ್ಯವನ್ನು ಕಲ್ಪಿಸಲಾಗಿರುತ್ತದೆ. |
| ಆ | ಬಂದಿದ್ದಲ್ಲಿ, ವಿದ್ಯಾರ್ಥಿನಿಯರ ನೂತನ ವಸತಿನಿಲಯಗಳ ಮಂಜೂರಾತಿಗೆ ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು; | ಮಂಡ್ಯ ಜಿಲ್ಲೆಗೆ ಈ ಕೆಳಕಂಡಂತೆ ಬಾಲಕಿಯರ ವಿದ್ಯಾರ್ಥಿನಿಲಯಗಳ ಮಂಜೂರಾತಿಯ ಪ್ರಸ್ತಾವನೆಯು ಸರ್ಕಾರದ ಪರಿಶೀಲನೆಯಲ್ಲಿದೆ.<br>1. ಮೆಟ್ರಿಕ್-ನಂತರದ ವೃತ್ತಿಪರ ಬಾಲಕಿಯರ ವಿದ್ಯಾರ್ಥಿನಿಲಯ, ಕೆ.ಆರ್.ಪೇಟೆ ಟೌನ್. ಮಂಡ್ಯ ಜಿಲ್ಲೆ.<br>2. ಮೆಟ್ರಿಕ್-ನಂತರದ ಸ್ನಾತಕೋತ್ತರ ಬಾಲಕಿಯರ ವಿದ್ಯಾರ್ಥಿನಿಲಯ, ಇಂಡುವಾಳು ಗ್ರಾಮ, ಮಂಡ್ಯ ತಾಲ್ಲೂಕು. (ಇಂಡುವಾಳು ಗ್ರಾಮದಲ್ಲಿನ ಮೆಟ್ರಿಕ್-ಪೂರ್ವ ಬಾಲಕರ ವಿದ್ಯಾರ್ಥಿನಿಲಯದ ಪರಿವರ್ತನೆ) |
| ಇ | ಮಂಡ್ಯ ಗ್ರಾಮಾಂತರ ಪ್ರದೇಶಗಳಿಂದ ಬರುವ ವಿದ್ಯಾರ್ಥಿನಿಯರಿಗಾಗಿ ವಸತಿನಿಲಯಗಳನ್ನು ತೆರೆಯಲು ಸರ್ಕಾರ ಯಾವ ಕಾಲಮಿತಿಯೊಳಗೆ ಮಂಜೂರಾತಿ ನೀಡುವುದು? (ವಿವರ ನೀಡುವುದು) | ಹೊಸ ವಿದ್ಯಾರ್ಥಿನಿಲಯಗಳ ಮಂಜೂರಾತಿಯು ರಾಜ್ಯದ ಒಟ್ಟಾರೆ ಬೇಡಿಕೆ ಹಾಗೂ ಆಯವ್ಯಯದಲ್ಲಿ ಒದಗಿಸಲಾಗುವ ಅನುದಾನದ ಲಭ್ಯತೆಯ ಆಧಾರದನ್ವಯ ಮಂಜೂರಾತಿ ನೀಡಲಾಗುವುದು. |

ಸಂಖ್ಯೆ:ಹಿಂವಕ 62 ಬಿಂಎಂಎಸ್ 2021

(ಕೋಟ ಶ್ರೀನಿವಾಸ ಪೂಜಾರಿ)
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

ಕರ್ನಾಟಕ ಸರ್ಕಾರ

ಸಂ.ಲೋಇ:71:ಐಎಫ್‌ಎ:2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:30-01-2021

OS
S/o.9d
01/2/2021

ಇವರಿಂದ,
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು
ಒಳನಾಡು ಜಲಸಾರಿಗೆ ಇಲಾಖೆ,
ವಿಕಾಸ ಸೌಧ, ಬೆಂಗಳೂರು.

ಇವರಿಗೆ,
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ, ಬೆಂಗಳೂರು.

ಮಾನ್ಯರೆ,

**ವಿಷಯ : ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ. ಶಿವಣ್ಣ .ಬಿ ಇವರ ಚುಕ್ಕೆ ಗುರತಿನ ಪ್ರಶ್ನೆ ಸಂಖ್ಯೆ: 618ಕ್ಕೆ ಉತ್ತರ ಸಲ್ಲಿಸುವ ಬಗ್ಗೆ.**

** ** **

ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ. ಶಿವಣ್ಣ .ಬಿ ಇವರ ಚುಕ್ಕೆ ಗುರತಿನ ಪ್ರಶ್ನೆ ಸಂಖ್ಯೆ: 618ಕ್ಕೆ ಸಿದ್ದಪಡಿಸಿರುವ ಉತ್ತರವನ್ನು 350 ಪ್ರತಿಗಳಲ್ಲಿ ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಿದೆ.

ತಮ್ಮ ವಿಶ್ವಾಸಿ,

(ಡಾ. ಸೋಮನಾಥ)
ಆಂತರಿಕ ಆರ್ಥಿಕ ಸಲಹೆಗಾರರು
ಲೋಕೋಪಯೋಗಿ ಇಲಾಖೆ

**ಕರ್ನಾಟಕ ವಿಧಾನಸಭೆ**
**15ನೇ ವಿಧಾನಸಭೆ**
**9ನೇ ಅಧಿವೇಶನ**

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 618 |
| ಸದಸ್ಯರ ಹೆಸರು | : | ಶ್ರೀ. ಶಿವಣ್ಣ .ಬಿ (ಆನೇಕಲ್) |
| ಉತ್ತರಿಸುವ ದಿನಾಂಕ | : | 01-02-2021 |
| ಉತ್ತರಿಸುವ ಸಚಿವರು | : | ಮಾನ್ಯ ಉಪಮುಖ್ಯಮಂತ್ರಿಗಳು ಹಾಗೂ ಲೋಕೋಪಯೋಗಿ ಸಚಿವರು |

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | 2020-21ನೇ ಸಾಲಿನಲ್ಲಿ ಆನೇಕಲ್ ತಾಲ್ಲೂಕಿನಲ್ಲಿ ಲೋಕೋಪಯೋಗಿ ಇಲಾಖೆಯಡಿ ಬರುವ ರಸ್ತೆಗಳ ಅಭಿವೃದ್ಧಿಗೆ ಅಪೆಂಡಿಕ್ಸ್-ಇ ನಲ್ಲಿ ಒದಗಿಸಿರುವ ಅನುದಾನವೆಷ್ಟು (ವಿವರ ನೀಡುವುದು) | ಅನೇಕಲ್ ತಾಲ್ಲೂಕು ವ್ಯಾಪ್ತಿಯಲ್ಲಿ 2020-21 ನೇ ಸಾಲಿನಲ್ಲಿ ಅಪೆಂಡಿಕ್ಸ್-ಇ ಯೋಜನೆಯಡಿ ಮಂಜೂರಾದ ಕಾಮಗಾರಿಗಳ ವಿವರ ಕೆಳಕಂಡಂತಿದೆ. (ರೂ.ಲಕ್ಷಗಳಲ್ಲಿ) |

| ಕಾಮಗಾರಿ | ಅಂದಾಜು ಮೊತ್ತ |
|---|---|
| **ಲೆಕ್ಕ ಶೀರ್ಷಿಕೆ:-5054-04-337-0-01-154 ಜಿಲ್ಲಾ ಮತ್ತು ಇತರೆ ರಸ್ತೆಗಳ ಸುಧಾರಣೆ** | |
| ಓಟಿ ಸರ್ಕಲ್, ಕಾಲುಬಾಳು ಹಳ್ಳಿ ಮತ್ತು ಓಡಿಯಾರ್ ಮಂಚನಹಳ್ಳಿ ವೈಸ ಯೋಗ ಕೇಂದ್ರ ಬೆಂಗಳೂರು ದಕ್ಷಿಣ ತಾಲ್ಲೂಕು ಬೆಂಗಳೂರು ನಗರ ಜಿಲ್ಲೆ ಒಂದು ಬಾರಿ ಅಭಿವೃದ್ಧಿ ಕಾಮಗಾರಿ. | 100.00 |

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಆ) | ಲೋಕೋಪಯೋಗಿ ಇಲಾಖೆಯಡಿ ಎಷ್ಟು ಕಿಲೋಮೀಟರ್ ರಸ್ತೆಯನ್ನು ಅಭಿವೃದ್ಧಿಗೊಳಿಸಲಾಗುವುದು? (ಪೂರ್ಣ ವಿವರ ನೀಡುವುದು) | 2020-21ನೇ ಸಾಲಿನಲ್ಲಿ ಲೋಕೋಪಯೋಗಿ ಇಲಾಖೆಯಿಂದ ರಸ್ತೆ ಮತ್ತು ಸೇತುವೆ ಕಾಮಗಾರಿಗಳ ಅಪೆಂಡಿಕ್ಸ್-ಇ ಯಡಿ ಅಭಿವೃದ್ಧಿಪಡಿಸಲು ನಿಗಧಿಪಡಿಸಿಕೊಂಡಿರುವ ರಸ್ತೆಗಳ ಉದ್ದ ಹಾಗೂ ಡಿಸೆಂಬರ್-2019ರ ಅಂತ್ಯಕ್ಕೆ ಅಭಿವೃದ್ಧಿಪಡಿಸಲಾದ ರಸ್ತೆ ಉದ್ದದ ವಿವರ ಕೆಳಕಂಡಂತಿದೆ. (ರಸ್ತೆಗಳ ಉದ್ದ ಕಿ.ಮೀಗಳಲ್ಲಿ) |

| ಕ್ರ.ಸಂ | ರಸ್ತೆ | ಗುರಿ | ಸಾಧನೆ |
|---|---|---|---|
| 1 | ರಾಜ್ಯ ಹೆದ್ದಾರಿ | 589 | 330 |
| 2 | ಜಿಲ್ಲಾ ಮತ್ತು ಇತರೆ ರಸ್ತೆ | 2936 | 2181 |

ಲೋಇ/71/ಐಎಫ್ಎ/2021

(ಗೋವಿಂದ ಎಂ ಕಾರಜೋಳ)
ಉಪಮುಖ್ಯಮಂತ್ರಿಗಳು ಹಾಗೂ
ಲೋಕೋಪಯೋಗಿ ಸಚಿವರು

## KARNATAKA LEGISLATIVE ASSEMBLY

**15th Assembly, 9th Session**

| | | |
|---|---|---|
| **Starred Question No.** | : | **618** |
| **Name of the Member** | : | **Sri Shivanna .B (Anekal)** |
| **To be replied on** | : | **01-02-2021** |
| **To be replied by** | : | **Hon'ble Deputy Chief Minister and Minister for Public Works** |

<table>
<tr><th>Sl. No</th><th>Question</th><th>Replies</th></tr>
<tr><td>A</td><td>What is the grant provided under Appendix-E for development of Public Works Roads in Anekal Taluk during 2020-21</td><td>Details of works approved during 2020-21 under Appendix-E scheme in Anekal Taluk are as under.<br>(Rs.in lakhs)
<table>
<tr><th>Work</th><th>Estimate Amount</th></tr>
<tr><td colspan="2">HoA 5054-04-337-0-01-154<br>District and other Road-Improvement</td></tr>
<tr><td>One time Improvement of O.T circle Kalubalu village and Odiyar manchanahalli wise yoga centre Bengaluru south taluk, Bengaluru Urban.</td><td>100.00</td></tr>
</table></td></tr>
<tr><td>B</td><td>How many k.m of road will be developed under Public works Department</td><td>The details of road length targeted for development of under road and bridge works Appendix-E by the Department of Public Works for the year 2020-21 and the road length developed at the end of December-2020 are as follows.<br>(Roads length in k.m)
<table>
<tr><th>Sl. No</th><th>Roads</th><th>Target</th><th>Achivemnet</th></tr>
<tr><td>1</td><td>State Highway</td><td>589</td><td>330</td></tr>
<tr><td>2</td><td>District and Other road</td><td>2936</td><td>2181</td></tr>
</table></td></tr>
</table>

**PWD/71/IFA/2021.**

(Govinda M Karajola)
**Deputy Chief Minister and Minister for Public Works**

06

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 359 |
| ಸದಸ್ಯರ ಹೆಸರು | : | ಶ್ರೀ ನಿಂಬಣ್ಣನವರ್ ಸಿ.ಎಂ. (ಕಲಘಟಗಿ) |
| ಉತ್ತರಿಸುವ ದಿನಾಂಕ | : | 01.02.2021 |
| ಉತ್ತರಿಸುವ ಸಚಿವರು | : | ಉಪ ಮುಖ್ಯಮಂತ್ರಿಗಳು, ಲೋಕೋಪಯೋಗಿ ಇಲಾಖೆ |

| | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಧಾರವಾಡ-ಕಲಘಟಗಿ ರಸ್ತೆ ರಾಜ್ಯ ಹೆದ್ದಾರಿಯಾಗಿದ್ದು, ವಾಹನ ದಟ್ಟಣೆಯಿಂದಾಗಿ ಪದೇ ಪದೇ ಹಾಳಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿದೆ |
| ಆ) | ಹಾಗಿದ್ದಲ್ಲಿ 35 ಕಿ.ಮೀ ಉದ್ದದ ಈ ರಸ್ತೆಯನ್ನು ಉನ್ನತೀಕರಣಗೊಳಿಸಿ ಗುಣಮಟ್ಟದ ಕಾಮಗಾರಿ ಕೈಕೊಳ್ಳಲು ಸರ್ಕಾರ ಕೈಗೊಂಡಿರುವ ಕ್ರಮವೇನು? | ಧಾರವಾಡ ಜಿಲ್ಲೆ ಕಲಘಟಗಿ ಪಟ್ಟಣಕ್ಕೆ ಸಂಪರ್ಕ ಕಲ್ಪಿಸುವ ಪಡುಬಿದ್ರಿ ಚಿಕ್ಕಾಲಗುಡ್ಡ ರಾಜ್ಯ ಹೆದ್ದಾರಿ-1ರ ಭಾಗವಾಗಿದ್ದು, ಧಾರವಾಡ ಮತ್ತು ಕಲಘಟಗಿ ಮಧ್ಯೆ 31.08 ಕಿ.ಮೀ. ಉದ್ದವಿರುತ್ತದೆ. ಕಲಘಟಗಿ ತಾಲ್ಲೂಕಿನ ವ್ಯಾಪ್ತಿಯಲ್ಲಿ ಬರುವ ಕಿಮೀ 340.30 ರಿಂದ 356.96 ರವರೆಗೆ 16.66 ಕಿ.ಮೀ. ಹಾಗೂ ಕಿ.ಮೀ. 356.96 ರಿಂದ 367.38 ರವರೆಗೆ 10.42 ಕಿ.ಮೀ. ಉದ್ದದ ರಸ್ತೆಯು ಧಾರವಾಡ ತಾಲೂಕಿನಲ್ಲಿ ಬರುತ್ತಿದ್ದು, ಉಳಿದ 4.00 ಕಿ.ಮೀ. ಉದ್ದದ ರಸ್ತೆಯು ರಾಷ್ಟ್ರೀಯ ಹೆದ್ದಾರಿ -63ರ ಭಾಗವಾಗಿರುತ್ತದೆ. ಸದರಿ ರಸ್ತೆಯ ಸರಪಳಿ ಕಿ.ಮೀ. 340.30 ರಿಂದ 356.96 ರವರೆಗೆ (ಆಯ್ದ ಭಾಗಗಳಲ್ಲಿ) ರಸ್ತೆ ಸುಧಾರಣೆಯನ್ನು ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ ಹಂತ-IVರ ಯೋಜನೆಯಡಿ ರೂ.20.00 ಕೋಟಿಗಳ ಅಂದಾಜು ಮೊತ್ತದಲ್ಲಿ ಅಭಿವೃದ್ಧಿಪಡಿಸಲು ಅಂದಾಜು ಪಟ್ಟಿಯನ್ನು ತಯಾರಿಸಲಾಗಿದ್ದು, ಪ್ರಸ್ತಾವನೆಯು ಪರಿಶೀಲನಾ ಹಂತದಲ್ಲಿದೆ.<br>ಧಾರವಾಡ ತಾಲ್ಲೂಕಿನ ವ್ಯಾಪ್ತಿಯಲ್ಲಿ ಬರುವ ರಸ್ತೆಯನ್ನು 2019-20ನೇ ಸಾಲಿನ ಅಪೆಂಡಿಕ್ಸ್-ಇ ರಡಿ ಕಿಮೀ 356.96 ರಿಂದ 362.00 ರವರೆಗೆ (5.04 ಕಿಮೀ ಉದ್ದ) ರಸ್ತೆಯನ್ನು ರೂ.450.00 ಲಕ್ಷಗಳ ಅಂದಾಜು ಮೊತ್ತದಲ್ಲಿ ಹಾಗೂ 2018-19ನೇ ಸಾಲಿನ ಅಪೆಂಡಿಕ್ಸ್-ಇ ರಡಿ ಕಿಮೀ 362.00 ರಿಂದ 367.38 ರವರೆಗೆ (5.38 ಕಿಮೀ ಉದ್ದ) ರೂ.510.00 ಲಕ್ಷ ಅಂದಾಜು ಮೊತ್ತದಲ್ಲಿ ಹೀಗೆ ಒಟ್ಟು 2 ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲಾಗಿದ್ದು, ಒಟ್ಟಾರೆ 10.42 ಕಿಮೀ ಉದ್ದದ ರಸ್ತೆಯನ್ನು ಅಭಿವೃದ್ಧಿಪಡಿಸಲಾಗಿದೆ.<br>ಮುಂದುವರೆದು, ವಾಹನಗಳ ಸುಗಮ ಸಂಚಾರಕ್ಕೆ ಅನುಕೂಲವಾಗುವಂತೆ ಹಾಳಾಗಿರುವ ರಸ್ತೆಯ ಸರಪಳಿ ಕಿ.ಮೀ. 344.42 ರಿಂದ 348.00 ರವರೆಗಿನ ರಸ್ತೆ ಅಭಿವೃದ್ಧಿಯನ್ನು 2020-21ನೇ ಸಾಲಿನ ಅಪೆಂಡಿಕ್ಸ್-ಇ ನಲ್ಲಿ ರೂ.100.00 ಲಕ್ಷಗಳ ಅಂದಾಜು ಮೊತ್ತದಲ್ಲಿ ಮರುಡಾಂಬರೀಕರಣ ಕೈಗೊಳ್ಳಲಾಗಿದೆ. ಅಲ್ಲದೆ ಲೆಕ್ಕ ಶೀರ್ಷಿಕೆ 3054 ರಾಜ್ಯ ಹೆದ್ದಾರಿ ರಸ್ತೆಗಳ ನಿರ್ವಹಣೆ ಅಡಿಯಲ್ಲಿ ರೂ.22.00 ಲಕ್ಷಗಳ ಅನುದಾನದಡಿ ರಸ್ತೆ ನಿರ್ವಹಣೆ ಕಾಮಗಾರಿಯನ್ನು ಕೈಗೆತ್ತಿಕೊಂಡು ಸುಗಮ ವಾಹನ ಸಂಚಾರಕ್ಕೆ ಅನುವು ಮಾಡಿಕೊಡಲಾಗಿದೆ. |

ಲೋಇ 1 ಸಿಕ್ಯೂಎನ್ 2021(ಇ)

(ಗೋವಿಂದ ಎಂ. ಕಾರಜೋಳ)
ಉಪ ಮುಖ್ಯಮಂತ್ರಿಗಳು,
ಲೋಕೋಪಯೋಗಿ ಇಲಾಖೆ

07

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ಜಮೀರ್ ಅಹಮದ್ ಖಾನ್ ಬಿ.ಝಡ್ (ಚಾಮರಾಜಪೇಟೆ) |
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | **294** |
| ಉತ್ತರಿಸಬೇಕಾದ ದಿನಾಂಕ | : | 01.02.2021 |
| ಉತ್ತರಿಸಬೇಕಾದ ಸಚಿವರು | : | ವಸತಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಚಾಮರಾಜಪೇಟೆ ಮತ ಕ್ಷೇತ್ರದ ವ್ಯಾಪ್ತಿಯಲ್ಲಿ ಸುಮಾರು 17 ಕೊಳಚೆ ಪ್ರದೇಶಗಳಿದ್ದು, ಸದರಿ ಕೊಳಚೆ ಪ್ರದೇಶದಲ್ಲಿ ಹಲವಾರು ಕಡುಬಡವ ಕುಟುಂಬಗಳು ಸುಮಾರು ವರ್ಷಗಳಿಂದ ವಾಸಿಸುತ್ತಿದ್ದು, ಇವರುಗಳಿಗೆ ಹಕ್ಕು ಪತ್ರ ನೀಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; | ಬಂದಿದೆ.<br><br>ಬೆಂಗಳೂರು ನಗರದ ಚಾಮರಾಜಪೇಟೆ ವಿಧಾನ ಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಯ ಕಾಯಿದೆ ಪ್ರಕಾರ 12 ಘೋಷಿತ ಕೊಳಚೆ ಪ್ರದೇಶಗಳಿರುತ್ತವೆ. |
| (ಆ) | ಬಂದಿದ್ದಲ್ಲಿ, ಹಕ್ಕುಪತ್ರಗಳನ್ನು ನೀಡಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು ? (ಆದೇಶದ ಪ್ರತಿಯೊಂದಿಗೆ ವಿವರ ನೀಡುವುದು) | ಸರ್ಕಾರದ ಆದೇಶ ಸಂಖ್ಯೆ:ವಇ 88 ಎಸ್ ಬಿಎಂ 2020, ದಿನಾಂಕ:26.11.2020 ರಲ್ಲಿ ಸರ್ಕಾರಿ ಹಾಗೂ ನಗರ ಸ್ಥಳೀಯ ಸಂಸ್ಥೆಗಳ ಮಾಲೀಕತ್ವದಲ್ಲಿರುವ ಘೋಷಿತ ಕೊಳಚೆ ಪ್ರದೇಶಗಳ ನಿವಾಸಿಗಳಿಗೆ ಹಕ್ಕು ಪತ್ರವನ್ನು ನೀಡಲು ಆದೇಶವನ್ನು ಹೊರಡಿಸಲಾಗಿದೆ.<br><br>ಸರ್ಕಾರಿ ಹಾಗೂ ನಗರ ಸ್ಥಳೀಯ ಸಂಸ್ಥೆಗಳ ಮಾಲೀಕತ್ವದಲ್ಲಿರುವ ಘೋಷಿತ ಕೊಳಚೆ ಪ್ರದೇಶಗಳ ಜಮೀನನ್ನು ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಗೆ ಹಸ್ತಾಂತರಿಸಲು ನಗರಾಭಿವೃದ್ಧಿ ಇಲಾಖೆಗೆ ದಿನಾಂಕ:07-12-2020 ರಂದು ಪತ್ರವನ್ನು ಬರೆಯಲಾಗಿದೆ. ಮಂಡಳಿಗೆ ಜಮೀನನ್ನು ಹಸ್ತಾಂತರಿಸಿದ ನಂತರ ಸರ್ಕಾರದ ಆದೇಶದಂತೆ ಹಕ್ಕು ಪತ್ರ ನೀಡಲು ಕ್ರಮ ವಹಿಸಲಾಗುವುದು. ಸರ್ಕಾರದ ಆದೇಶದ ಪ್ರತಿಯನ್ನು ಅನುಬಂಧದಲ್ಲಿ ಒದಗಿಸಲಾಗಿದೆ. |

ಸಂಖ್ಯೆ :ವಇ 17 ಎಸ್‌ಬಿಎಂ 2021

(ವಿ. ಸೋಮಣ್ಣ)
ವಸತಿ ಸಚಿವರು

File No.DOH/88/SBM/2020-HSD 2-Housing SECRETARIAT

**ಕರ್ನಾಟಕ ಸರ್ಕಾರದ ನಡವಳಿಗಳು**

**ವಿಷಯ:** ರಾಜ್ಯದಾದ್ಯಂತ ಸರ್ಕಾರಿ ಮಾಲೀಕತ್ವದಲ್ಲಿರುವ ಘೋಷಿತ ಕೊಳಚೆ ಪ್ರದೇಶಗಳ ನಿವಾಸಿಗಳಿಗೆ ಹಕ್ಕುಪತ್ರ ವಿತರಿಸಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:**

1) ಸರ್ಕಾರದ ಆದೇಶ ಸಂಖ್ಯೆ:ನಅಇ 122 ಎಂಎನ್‌ಜಿ 2009(ಭಾ), ದಿನಾಂಕ:13.01.2010.
2) ಸರ್ಕಾರದ ಆದೇಶ ಸಂಖ್ಯೆ:ಯುಡಿಡಿ 176 ಸಿಎಸ್‌ಎಸ್ 2010, ದಿನಾಂಕ:24.01.2011.
3) ಸರ್ಕಾರದ ಆದೇಶ ಸಂಖ್ಯೆ:ವಇ 135 ಕೊಮಂಇ 2014, ದಿನಾಂಕ:17.01.2015.
4) ದಿನಾಂಕ:13.07.2015 ರಂದು ನಡೆದ ಸಭಾ ನಡವಳಿ.
5) ದಿನಾಂಕ:13.05.2019 ಮತ್ತು 13.05.2020 ರಂದು ನಡೆದ ಸಭಾ ನಡವಳಿಗಳು.
6) ದಿನಾಂಕ:01.07.2020 ರಂದು ನಡೆದ ಸಭಾ ನಡವಳಿ.
7) ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ ಇವರ ಪತ್ರ ಸಂಖ್ಯೆ:ಕಕೊಅಮ/ಕಂ-1:ಸ.ಕಂ.ಅ/ಹಕ್ಕುಪತ್ರ/2014-15, ದಿನಾಂಕ:24.05.2018, 19.02.2019 ಮತ್ತು 20.05.2020

**ಪ್ರಸ್ತಾವನೆ:**

ಮೇಲೆ ಓದಲಾದ (1) ರ ಆದೇಶದಲ್ಲಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ವ್ಯಾಪ್ತಿಯಲ್ಲಿ ಘೋಷಿತ ಕೊಳಚೆ ಪ್ರದೇಶಗಳಲ್ಲಿನ ಸರ್ಕಾರಿ ಜಮೀನುಗಳಲ್ಲಿ ಅನಧಿಕೃತವಾಗಿ ವಾಸವಾಗಿರುವ ಕೊಳಚೆ ಪ್ರದೇಶದ ನಿವಾಸಿಗಳಿಗೆ 10 ವರ್ಷಗಳ ಮಾರಾಟ ಮತ್ತು ಗುತ್ತಿಗೆ ಕರಾರು ಒಪ್ಪಂದದ ಹಕ್ಕುಪತ್ರಗಳನ್ನು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ವ್ಯಾಪ್ತಿಯಲ್ಲಿ ಘೋಷಿತ ಕೊಳಚೆ ಪ್ರದೇಶಗಳಲ್ಲಿನ ಸರ್ಕಾರಿ ಜಮೀನುಗಳನ್ನು ಕಂದಾಯ ಇಲಾಖೆಯು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಉಚಿತವಾಗಿ ವರ್ಗಾಯಿಸುವುದು, ಕಂದಾಯ ಇಲಾಖೆಯು ಸದರಿ ಸರ್ಕಾರಿ ಜಮೀನುಗಳನ್ನು ವರ್ಗಾಯಿಸಿದ ನಂತರ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯು ಅಂತಹ ಕೊಳಚೆ ಪ್ರದೇಶಗಳ ನಿವಾಸಿಗಳಿಗೆ ಪ್ರತಿ ಚದರ ಮೀಟರಿಗೆ ರೂ.200/-ರಂತೆ ದರವನ್ನು ವಿಧಿಸಿ 10 ವರ್ಷಗಳ ಮಾರಾಟ ಮತ್ತು ಗುತ್ತಿಗೆ ಕರಾರು ಒಪ್ಪಂದದ ಪತ್ರಗಳನ್ನು ನೀಡುವುದು ಮತ್ತು ಸದರಿ ಫಲಾನುಭವಿಗಳು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ವ್ಯಾಪ್ತಿಯಲ್ಲಿ ನಿವೇಶನ/ಮನೆಯನ್ನು ಹೊಂದಿಲ್ಲವೆಂಬುದನ್ನು ಖಚಿತಪಡಿಸಿಕೊಳ್ಳುವ ಷರತ್ತಿಗೊಳಪಟ್ಟು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

ಮೇಲೆ ಓದಲಾದ (2) ರ ಆದೇಶದಲ್ಲಿ ಕೊಳಚೆ ಪ್ರದೇಶಗಳ ನಿವಾಸಿಗಳಿಗೆ ಹಕ್ಕುಪತ್ರಗಳನ್ನು ನೀಡುವುದನ್ನು ತಡೆಹಿಡಿದು Vertical Re-Development of Slums ಮಾದರಿಯಲ್ಲಿ ಮನೆಗಳನ್ನು ನಿರ್ಮಿಸಿ ಕೊಳಚೆ ನಿವಾಸಿಗಳಿಗೆ 15 ವರ್ಷಗಳ ಪರಭಾರೆ ಮಾಡಬಾರದಾಗಿ ಷರತ್ತು ವಿಧಿಸಿ, ಹಂಚಿಕೆ ಮಾಡಿ 15 ವರ್ಷಗಳ ನಂತರ ಷರತ್ತು ಬದ್ಧ ಕ್ರಯಪತ್ರವನ್ನು ನೀಡಲು ಆದೇಶಿಸಲಾಗಿದೆ.

ಮೇಲೆ ಓದಲಾದ (3) ರ ಆದೇಶದಲ್ಲಿ ಕೊಳಚೆ ನಿವಾಸಿಗಳಿಗೆ ಹಕ್ಕುಪತ್ರಗಳನ್ನು ನೀಡುವ ಬಗ್ಗೆ ಒಂದು ತಾತ್ವಿಕವಾದ ನಿಖರವಾದ ಪ್ರಸ್ತಾವನೆಯನ್ನು ರಚಿಸಿ, ವರದಿ ನೀಡಲು ನಿರ್ದೇಶಿಸಿ, ಸರ್ಕಾರದ

ಕಾರ್ಯದರ್ಶಿ, ವಸತಿ ಇಲಾಖೆ ರವರ ಅಧ್ಯಕ್ಷತೆಯಲ್ಲಿ ಸದಸ್ಯರುಗಳನ್ನೊಳಗೊಂಡ ಒಂದು ಸಮಿತಿಯನ್ನು ರಚಿಸಿರುವುದನ್ನು ಮಾರ್ಪಡಿಸಿ, ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ಪುನರ್ ರಚಿಸಲಾಗಿದೆ.

ಮೇಲೆ ಓದಲಾದ (4) ರ ಸಭಾ ನಡವಳಿಯಲ್ಲಿ ಸರ್ಕಾರದ ಅಪರ ಕಾರ್ಯದರ್ಶಿರವರ ಅಧ್ಯಕ್ಷತೆಯಲ್ಲಿ ನಗರಾಭಿವೃದ್ಧಿ ಇಲಾಖೆ ವತಿಯಿಂದ ಹೊರಡಿಸಲಾದ ಸರ್ಕಾರದ ಆದೇಶ ಸಂಖ್ಯೆ:UDD 176 CSS 2010, ದಿನಾಂಕ:24.01.2011 ರನ್ನು ತಡೆ ಹಿಡೆಯುವ ಕುರಿತು ಸಚಿವ ಸಂಪುಟದ ಅನುಮೋದನೆಗೆ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಮತ್ತು ರಾಜ್ಯಾದ್ಯಂತ ಮಂಡಳಿ ವತಿಯಿಂದ ಘೋಷಿಸಲಾದ ಕೊಳಚೆ ಪ್ರದೇಶಗಳ, ಸ್ಥಳೀಯ ಸಂಸ್ಥೆಗಳ ಅಧೀನದಲ್ಲಿರುವ ಕೊಳಚೆ ಪ್ರದೇಶದ ನಿವಾಸಿಗಳಿಗೆ ಆಯಾ ಸ್ಥಳೀಯ ಸಂಸ್ಥೆಗಳಾದ ಮಹಾನಗರ ಪಾಲಿಕೆ, ನಗರ ಸಭೆ, ಪುರಸಭೆ ಮತ್ತು ಪಟ್ಟಣ ಪಂಚಾಯಿತಿ ವತಿಯಿಂದಲೇ ನಿಯಮಾನುಸಾರ ನಿವೇಶನದ ಹಕ್ಕುಪತ್ರ ನೀಡಲು ನಿರ್ಣಯಿಸಲಾಗಿದೆ.

ಮೇಲೆ ಓದಲಾದ (5) ರ ನಡವಳಿಗಳಲ್ಲಿ ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ರಾಜ್ಯದ ಒಟ್ಟು 2856 ಕೊಳಗೇರಿಗಳ ಪೈಕಿ ಸರ್ಕಾರ ಹಾಗೂ ಸ್ಥಳೀಯ ಸಂಸ್ಥೆಗಳ ಮಾಲೀಕತ್ವದಲ್ಲಿರುವ 1681 ಘೋಷಿತ ಕೊಳಗೇರಿಗಳ ನಿವಾಸಿಗಳಿಗೆ ಹಕ್ಕುಪತ್ರ ನೀಡುವ ಬಗ್ಗೆ ಸುಧೀರ್ಘವಾಗಿ ಚರ್ಚಿಸಿ, ಈ ಬಗ್ಗೆ ಕರ್ನಾಟಕ ಭೂ ಕಂದಾಯ ಕಾಯ್ದೆ ಕಲಂ 94 ಸಿ.ಸಿ ರಡಿ ಅವಕಾಶ ಇರುವ ಬಗ್ಗೆ ಪರಿಶೀಲಿಸುವಂತೆ ಹಾಗೂ ಅವಕಾಶ ಇಲ್ಲದಿದ್ದಲ್ಲಿ ಈ ಬಗ್ಗೆ ಪ್ರಸ್ತಾವನೆಯೊಂದನ್ನು ಸಚಿವ ಸಂಪುಟದ ಮುಂದೆ ಮಂಡಿಸಿ, ಆದೇಶ ಪಡೆಯುವ ಬಗ್ಗೆ ಕ್ರಮವಹಿಸಲು ನಿರ್ಣಯಿಸಲಾಯಿತು. ಹಾಗೂ ಪ್ರಸಕ್ತ ಸಂದರ್ಭದಲ್ಲಿ ಪ್ರಾರಂಭಿಕವಾಗಿ ನಗರ ಸಭೆ, ಪುರಸಭೆ ಹಾಗೂ ಪಟ್ಟಣ ಪಂಚಾಯ್ತಿಗಳ ವ್ಯಾಪ್ತಿಯಲ್ಲಿರುವ ಸರ್ಕಾರಿ ಘೋಷಿತ ಕೊಳಗೇರಿಗಳಲ್ಲಿ ನಿವಾಸಿಗಳಿಗೆ ಹಕ್ಕುಪತ್ರ ವಿತರಣೆ ಮಾಡುವ ಸಲುವಾಗಿ ಕರಡು ಸಚಿವ ಸಂಪುಟ ಟಿಪ್ಪಣಿಯೊಂದಿಗೆ ಕಂದಾಯ ಇಲಾಖೆ ಅಭಿಪ್ರಾಯ ಪಡೆಯುವಂತೆ ಸೂಚಿಸಲಾಯಿತು.

ಮೇಲೆ ಓದಲಾದ (6) ರ ನಡವಳಿಯಲ್ಲಿ ಮಾನ್ಯ ವಸತಿ ಸಚಿವರ ಅಧ್ಯಕ್ಷತೆಯಲ್ಲಿ ಮಾನ್ಯ ನಗರಾಭಿವೃದ್ಧಿ ಮತ್ತು ಪೌರಾಡಳಿತ ಸಚಿವನ್ನೊಳಗೊಂಡಂತೆ ಸರ್ಕಾರಿ ಮತ್ತು ನಗರ ಸ್ಥಳೀಯ ಸಂಸ್ಥೆಗಳ ಮಾಲೀಕತ್ವದಲ್ಲಿರುವ ಜಮೀನಿನಲ್ಲಿನ ಘೋಷಿತ ಕೊಳಗೇರಿಗಳಲ್ಲಿ ವಾಸಿಸುವ ನಿವಾಸಗಳಿಗೆ (ಖಾಸಗಿ ಜಮೀನುಗಳ ಕೊಳಚೆ ಪ್ರದೇಶಗಳನ್ನು ಹೊರತುಪಡಿಸಿ) ಹಕ್ಕುಪತ್ರ ನೀಡುವ ಸಲುವಾಗಿ ಪ್ರಸ್ತಾವನೆಯನ್ನು ಸಚಿವ ಸಂಪುಟದ ಮುಂದೆ ಮಂಡಿಸುವ ಪೂರ್ವದಲ್ಲಿ ಈ ಪ್ರಸ್ತಾವನೆಗೆ ನಗರಾಭಿವೃದ್ಧಿ ಮತ್ತು ಪೌರಾಡಳಿತ ಇಲಾಖೆಗಳ ಅಭಿಪ್ರಾಯದೊಂದಿಗೆ ಶೀಘ್ರವಾಗಿ ಸಚಿವ ಸಂಪುಟದ ಅನುಮೋದನೆಗೆ ಮಂಡಿಸಲು ಸೂಚಿಸಲಾಯಿತು.

ಮೇಲೆ ಓದಲಾದ (7) ರ ಪತ್ರದಲ್ಲಿ ರಾಜ್ಯಾದ್ಯಂತ ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ ವತಿಯಿಂದ ಕೊಳಗೇರಿ ಗುಣ ಲಕ್ಷಣಗಳನ್ನು ಹೊಂದಿರುವ ಪ್ರದೇಶಗಳನ್ನು ಗುರುತಿಸಿ ಅವುಗಳನ್ನು

ಕರ್ನಾಟಕ ಕೊಳಚೆ ಪ್ರದೇಶಗಳು (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973 ರ ಕಲಂ 3 ಮತ್ತು 11 ರಡಿಯಲ್ಲಿ ಕೊಳಚೆ ಪ್ರದೇಶವೆಂದು ಆಯಾ ಜಿಲ್ಲೆಯ ಜಿಲ್ಲಾಧಿಕಾರಿಗಳು ಘೋಷಣೆ ಹೊರಡಿಸಿದ ತರುವಾಯ ಘೋಷಿತ ಕೊಳಚೆ ಪ್ರದೇಶಗಳಲ್ಲಿ ರಸ್ತೆ, ಚರಂಡಿ, ಕುಡಿಯುವ ನೀರು, ಬೀದಿ ದೀಪ, ವಿದ್ಯುತ್ ಸೌಕರ್ಯ, ಶೌಚಾಲಯಗಳು ಮುಂತಾದ ನಾಗರೀಕ ಸೌಲಭ್ಯಗಳನ್ನು ಮಂಡಳಿ ವತಿಯಿಂದ ಒದಗಿಸಲಾಗುತ್ತಿದ್ದು, ಕೊಳಗೇರಿ ನಿವಾಸಿಗಳ ಆರ್ಥಿಕ ಮತ್ತು ಸಾಮಾಜಿಕ ಸಮೀಕ್ಷೆ ನಡೆಸಿ, ಮಂಡಳಿ ಕಾಯ್ದೆ ಕಲಂ 4(2) ರನ್ವಯ ನೋಂದಣಿ/ಪರಿಚಯ ಪತ್ರವನ್ನು ವಿತರಿಸಲು ಕ್ರಮವಹಿಸಲಾಗುತ್ತಿದೆ. ಮಂಡಳಿಯ ವತಿಯಿಂದ ಕೆಲವೊಂದು ಕೊಳಚೆ ಪ್ರದೇಶಗಳು ಕ್ರಮಬದ್ಧವಾಗಿಲ್ಲದ ಹಾಗೂ ಹೆಚ್ಚು ಜನಸಾಂದ್ರತೆಯನ್ನು ಹೊಂದಿರುವ ಕಾರಣ ಈ ಪ್ರದೇಶಗಳನ್ನು ಸಮಗ್ರವಾಗಿ ಲಂಬೀಕೃತ ಮಾದರಿಯಲ್ಲಿ ಅಭಿವೃದ್ಧಿಗೊಳಿಸುವ ಸಲುವಾಗಿ ಸರ್ಕಾರದ ಆದೇಶ ಸಂಖ್ಯೆ:ನಅಇ 176 ಸಿಎಸ್‌ಎಸ್ 2010, ದಿನಾಂಕ:24.01.2011 ರಲ್ಲಿ ಕೊಳಚೆ ಪ್ರದೇಶಗಳ ನಿವಾಸಿಗಳಿಗೆ ಹಕ್ಕುಪತ್ರಗಳನ್ನು(ಪಟ್ಟಾ) ನೀಡುವ ಬಗ್ಗೆ ತಡೆಹಿಡಿದು, ಲಂಬೀಕೃತ ಮಾದರಿಯಲ್ಲಿ ಮನೆಗಳನ್ನು ನಿರ್ಮಿಸಿ, ಕೊಳಗೇರಿ ನಿವಾಸಿಗಳಿಗೆ 15 ವರ್ಷಗಳ ಪರಭಾರೆ ಮಾಡಬಾರದಾಗಿ ಷರತ್ತು ವಿಧಿಸಿ, ಮನೆಗಳನ್ನು ಹಂಚಿಕೆ ಮಾಡಿ 15 ವರ್ಷಗಳ ನಂತರ ಶುದ್ಧ ಮಾಲೀಕತ್ವ ಪತ್ರವನ್ನು ಮಾಡಿಕೊಡಲಾಗುತ್ತಿದೆ.

ರಾಜ್ಯಾದ್ಯಂತ ಸ್ಥಳೀಯ ನಗರಸಭೆ, ಪುರಸಭೆ ಮತ್ತು ಪಟ್ಟಣ ಪಂಚಾಯಿತಿ ವ್ಯಾಪ್ತಿಯಲ್ಲಿನ ಸರ್ಕಾರಿ ಮಾಲೀಕತ್ವದಲ್ಲಿ 326 ಘೋಷಿತ ಕೊಳಚೆ ಪ್ರದೇಶಗಳಿದ್ದು, ಅಂದಾಜು 64,268 ಕುಟುಂಬಗಳು ವಾಸವಿದ್ದು, ಸುಮಾರು 3,23,525 ಜನ ಸಂಖ್ಯೆಯಿಂದ ಕೂಡಿದ್ದು, ಈ ಸರ್ಕಾರಿ ಜಮೀನುಗಳಲ್ಲಿರುವ ಘೋಷಿತ ಕೊಳಚೆ ಪ್ರದೇಶಗಳು ಸುಮಾರು 1628 ಎಕರೆ 22 ಗುಂಟೆ ವಿಸ್ತೀರ್ಣದಿಂದ ಕೂಡಿರುವುದಾಗಿ ಅಂದಾಜಿಸಲಾಗಿದೆ. ಕೊಳಗೇರಿ ನಿವಾಸಿಗಳಿಗೆ ಪರಿಚಯ ಪತ್ರವನ್ನು ಮಾತ್ರ ನೀಡುತ್ತಿದ್ದು, ಇದರಿಂದ ಅವರುಗಳು ಬ್ಯಾಂಕ್‌ಗಳಲ್ಲಿ ಸಾಲ ಪಡೆದು ಮನೆಗಳನ್ನು ಅಭಿವೃದ್ಧಿ ಪಡಿಸಿಕೊಳ್ಳಲು ಆಗುತ್ತಿಲ್ಲ. ಹಕ್ಕುಪತ್ರ ನೀಡಿದರೆ, ನಿವೇಶನಕ್ಕೆ ಅವರೇ ಮಾಲೀಕರಾಗುವುದರಿಂದ ಅವರುಗಳಿಗೆ ಬ್ಯಾಂಕ್‌ಗಳಿಂದ ಸಾಲ ದೊರಕಿ ವಸತಿಗಳ ಅಭಿವೃದ್ಧಿಪಡಿಸಿಕೊಳ್ಳಲು ಅನುಕೂಲವಾಗುತ್ತದೆ. ಆದ್ದರಿಂದ ರಾಜ್ಯಾದ್ಯಂತ ಸರ್ಕಾರ ಹಾಗೂ ಸ್ಥಳೀಯ ಸಂಸ್ಥೆಗಳ ಮಾಲೀಕತ್ವದಲ್ಲಿರುವ ಘೋಷಿತ ಕೊಳಗೇರಿ ಪ್ರದೇಶಗಳ ನಿವಾಸಿಗಳಿಗೆ ಹಕ್ಕುಪತ್ರ ನೀಡುವುದರಿಂದ ನಿವಾಸಿಗಳು ತಮ್ಮ ಬದುಕನ್ನು ಉತ್ತಮವಾಗಿ ರೂಪಿಸಿಕೊಳ್ಳಲು ಅನುಕೂಲವಾಗುವುದರಿಂದ ಸೂಕ್ತ ಆದೇಶವನ್ನು ಹೊರಡಿಸುವಂತೆ ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ, ಬೆಂಗಳೂರು ರವರು ಕೋರಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ವಇ 88 ಎಸ್‌ಬಿಎಂ 2020,ಬೆಂಗಳೂರು, ದಿನಾಂಕ:26.11.2020**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಸರ್ಕಾರದ ಆದೇಶ ಸಂಖ್ಯೆ:UDD 176 CSS 2010, ದಿನಾಂಕ:24.01.2011 ರ ಆದೇಶವನ್ನು ಹಿಂಪಡೆದು, ಕೆಳಕಂಡ ತ:ಖ್ತೆಯಲ್ಲಿ ನಮೂದಿಸಿರುವಂತೆ ಸಾಂಕೇತಿಕ(Nominal) ದರವನ್ನು ನಿಗಧಿಪಡಿಸಿ ಕರ್ನಾಟಕ ರಾಜ್ಯದಾದ್ಯಂತ ಸರ್ಕಾರ, ಬೆಂಗಳೂರು ಮಹಾನಗರ ಪಾಲಿಕೆ ಹಾಗೂ ಮಹಾ ನಗರ ಪಾಲಿಕೆಗಳ ಮಾಲೀಕತ್ವದಲ್ಲಿ ಇರುವ

596 ಘೋಷಿತ ಕೊಳಚೆ ಪ್ರದೇಶಗಳು ಹಾಗೂ ಸ್ಥಳೀಯ ಸಂಸ್ಥೆಗಳ ಮಾಲೀಕತ್ವದಲ್ಲಿರುವ 1277 ಘೋಷಿತ ಕೊಳಚೆ ಪ್ರದೇಶಗಳಲ್ಲಿ ವಾಸವಾಗಿರುವ ಕೊಳಚೆ ನಿವಾಸಿಗಳಿಗೆ ಹಕ್ಕುಪತ್ರವನ್ನು ಕೆಳಕಂಡಂತೆ ವಿತರಿಸಲು ಅನುಮತಿ ನೀಡಲಾಗಿದೆ.

| ಕ್ರ. ಸಂ | ಸ್ಥಳದ ವ್ಯಾಪ್ತಿ | ಅಳತೆ ಚದರ ಅಡಿಗಳಲ್ಲಿ | ಕ್ರಮಬದ್ಧಗೊಳಿಸುವಿಕೆ ದರ | |
|---|---|---|---|---|
| | | | ಇತರೆ | ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ/ ಅಂಗವಿಕಲರು |
| 1. | ಪುರಸಭೆ ಮತ್ತು ಪಟ್ಟಣ ಪಂಚಾಯಿತಿ | 1200 ಚ.ಅಡಿಗಳಿಗೆ ಮೀರದಂತೆ | ರೂ.3,000/- | ರೂ.1,500/- |
| 2. | ನಗರ ಸಭೆ | 600 ಚ.ಅಡಿಗಳಿಗೆ ಮೀರದಂತೆ | ರೂ.4,000/- | ರೂ.2,000/- |
| 3. | ಬಿ.ಬಿ.ಎಂ.ಪಿ/ ಮಹಾನಗರ ಪಾಲಿಕೆ | 600 ಚ.ಅಡಿಗಳಿಗೆ ಮೀರದಂತೆ | ರೂ.10,000/- | ರೂ.5,000/- |

ಮೇಲ್ಕಂಡಂತೆ ಕೊಳಗೇರಿ ನಿವಾಸಿಗಳಿಗೆ ಹಕ್ಕುಪತ್ರ ನೀಡುವ ಸಂಧರ್ಭದಲ್ಲಿ ಈ ಕೆಳಕಂಡ ಮಾರ್ಗಸೂಚಿ/ಷರತ್ತುಗಳನ್ನು ಅಳವಡಿಸಲು ಸೂಚಿಸಿದೆ.

1. ರಾಜ್ಯಾದ್ಯಂತ ಸರ್ಕಾರಿ, ಬಿ.ಬಿ.ಎಂ.ಪಿ., ಮಹಾನಗರಪಾಲಿಕೆ ಮಾಲೀಕತ್ವದಲ್ಲಿ 600 ಚದರ ಅಡಿಗೆ ಮೀರದಂತೆ, ನಗರಸಭೆ ಮಾಲೀಕತ್ವದಲ್ಲಿ 600 ಚದರ ಅಡಿಗೆ ಮೀರದಂತೆ ಮತ್ತು ಪುರಸಭೆ ಹಾಗೂ ಪಟ್ಟಣ ಪಂಚಾಯತ್ ಮಾಲೀಕತ್ವದಲ್ಲಿ 1200 ಚದರ ಅಡಿಗೆ ಮೀರದಂತೆ ಇರುವ ಕೊಳಚೆ ನಿವಾಸಿಗಳ ಮನೆ/ಸ್ವತ್ತುಗಳಿಗೆ ಹಕ್ಕುಪತ್ರ ನೀಡುವುದು.

2. ರಾಜ್ಯಾದ್ಯಂತ ಸರ್ಕಾರಿ, ಮಹಾನಗರ ಪಾಲಿಕೆ, ನಗರಸಭೆ, ಪುರಸಭೆ ಮತ್ತು ಪಟ್ಟಣ ಪಂಚಾಯಿತಿ ವ್ಯಾಪ್ತಿಯಲ್ಲಿನ ಸರ್ಕಾರಿ/ಸ್ಥಳೀಯ ಸಂಸ್ಥೆಗಳ ಮಾಲೀಕತ್ವದಲ್ಲಿರುವ ಘೋಷಿತ ಕೊಳಚೆ ಪ್ರದೇಶಗಳ ಜಮೀನುಗಳನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ, 1973 ರ ಕಲಂ 27 (3) ರನ್ವಯ ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಗೆ ಕ್ರಮಬದ್ಧವಾಗಿ ವರ್ಗಾವಣೆಯಾದ ನಂತರ, ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಮತ್ತು ಕೆಲವು ಇತರ ಕಾನೂನು (ತಿದ್ದುಪಡಿ ಕಾಯ್ದೆ) 2002 ರ ಕಲಂ 27(ಎ) ಹಾಗೂ ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) (ತಿದ್ದುಪಡಿ) ನಿಯಮ 2004 ರ ನಿಯಮ 7 (ಎ) ಪ್ರಕಾರ ಹಕ್ಕುಪತ್ರ ನೀಡುವುದು.

3. ಕೊಳಚೆ ಅಭಿವೃದ್ಧಿ ಮಂಡಳಿಯು ಕೊಳಚೆ ಪ್ರದೇಶವನ್ನು ಅಭಿವೃದ್ಧಿಪಡಿಸಿ, ಹಕ್ಕುಪತ್ರ ವಿತರಿಸಿ, ಉಳಿಕೆಯಾಗುವ ಜಾಗ, ರಸ್ತೆ, ನಾಗರೀಕ ಸೌಲಭ್ಯಗಳ ಜಾಗ ಹಾಗೂ ಇನ್ನಿತರೆ ಜಾಗಗಳನ್ನು ಸಂಬಂಧಿಸಿದ ನಗರ ಸ್ಥಳೀಯ ಸಂಸ್ಥೆಗೆ ವರ್ಗಾಯಿಸುವುದು.

4. ಕೊಳಚೆ ನಿವಾಸಿಗಳಿಗೆ ಹಕ್ಕುಪತ್ರಗಳನ್ನು ವಿತರಿಸುವ ಕಾರ್ಯವು 6 ತಿಂಗಳೊಳಗಾಗಿ ಪೂರ್ಣಗೊಳಿಸುವುದು.
5. ಸದರಿ ಕೊಳಚೆ ನಿವಾಸಿಗಳು ರಸ್ತೆ ಮಧ್ಯೆ ಮನೆಗಳನ್ನು ಕಟ್ಟಿರುವವರನ್ನು ಸ್ಥಳಾಂತರಿಸಿ, ಮನೆಗಳ ನಿರ್ಮಾಣ ಮಾಡಲು ಕ್ರಮ ಕೈಗೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 578 ವೆಚ್ಚ-9/2019, ದಿನಾಂಕ:05.09.20219 ಮತ್ತು ದಿನಾಂಕ:2.08.2020ರಂದು ನಡೆದ ಸಚಿವ ಸಂಪುಟದ ಪ್ರಕರಣ ಸಂಖ್ಯೆ: ಸಿ: 383/2020 ರ ಅನುಮೋದನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ,

(ಜಿ.ಲಕ್ಷ್ಮಣ) 26/4
ಸರ್ಕಾರದ ಅಧೀನ ಕಾರ್ಯದರ್ಶಿ-2,
ವಸತಿ ಇಲಾಖೆ.

ಇವರಿಗೆ:

ಸಂಕಲನಾಧಿಕಾರಿಯವರು, ಕರ್ನಾಟಕ ರಾಜ್ಯಪತ್ರ,ಬೆಂಗಳೂರು- ಈ ಆದೇಶವನ್ನು ಇ-ರಾಜ್ಯ ಪತ್ರದಲ್ಲಿ ಪ್ರಕಟಿಸಲು ಅಗತ್ಯ ಸಹಕಾರ ನೀಡಲು ಕೋರಿದೆ.

ಪ್ರತಿ ಇವರಿಗೆ:-

1) ಪ್ರಧಾನ ಮಹಾಲೇಖಪಾಲರು(ಜಿ&ಎಸ್‌ಎಸ್‌ಎ)(ಇ&ಆರ್‌ಎಸ್‌ಎ),ಕರ್ನಾಟಕ,ಬೆಂಗಳೂರು.
2) ಪ್ರಧಾನ ಮಹಾಲೇಖಪಾಲರು(ಎ&ಇ),ಕರ್ನಾಟಕ, ಬೆಂಗಳೂರು.
3) ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಆರ್ಥಿಕ ಇಲಾಖೆ, ವಿಧಾನ ಸೌದ, ಬೆಂಗಳೂರು.
4) ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ, ವಿಕಾಸ ಸೌದ,ಬೆಂಗಳೂರು.
5) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ/ ಕಾನೂನು ಇಲಾಖೆ.
6) ಸರ್ಕಾರದ ಪ್ರಧಾನ ಕಾರ್ಯದರ್ಶಿ,ನಗರಾಭಿವೃದ್ಧಿ ಇಲಾಖೆ(ಪೌರಾಡಳಿತ)/ ಸಂಸದೀಯ ವ್ಯವಹಾರಗಳ ಇಲಾಖೆ/ ಆರ್ಥಿಕ ಇಲಾಖೆ(ವೆಚ್ಚ).
7) ಆಯುಕ್ತರು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ,ಬೆಂಗಳೂರು.
8) ಮಾನ್ಯ ಮುಖ್ಯಮಂತ್ರಿಗಳ ಅಪರ ಮುಖ್ಯ ಕಾರ್ಯದರ್ಶಿಗಳು/ಪ್ರಧಾನ ಕಾರ್ಯದರ್ಶಿರವರುಗಳ ಆಪ್ತ ಕಾರ್ಯದರ್ಶಿಯವರು, ವಿಧಾನ ಸೌದ, ಬೆಂಗಳೂರು.
9) ವ್ಯವಸ್ಥಾಪಕ ನಿರ್ದೇಶಕರು, ರಾಜೀವ್ ಗಾಂಧಿ ವಸತಿ ನಿಗಮ ನಿಯಮಿತ, ಬೆಂಗಳೂರು.
10) ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ, ಬೆಂಗಳೂರು.
11) ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯ, ಬೆಂಗಳೂರು.
12) ಎಲ್ಲಾ ಜಿಲ್ಲಾಧಿಕಾರಿಗಳು/ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು,ಜಿಲ್ಲಾ ಪಂಚಾಯತ್.
13) ನಿರ್ದೇಶಕರು, ಖಜಾನೆ ನಿರ್ದೇಶನಾಲಯ, ಪೋಡಿಯಂ ಬ್ಲಾಕ್,ಬೆಂಗಳೂರು.
14) ನಿರ್ದೇಶಕರು,ಯೋಜನೆ,ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ(ಜಿಲ್ಲಾ ಯೋಜನಾ ವಿಭಾಗ), ಬಹುಮಹಡಿ ಕಟ್ಟಡ, ಬೆಂಗಳೂರು.
15) ಸಹ ನಿರ್ದೇಶಕಕರು,ಖಜಾನೆ ಗಣಕಜಾಲ ಕೇಂದ್ರ, ರೇಸ್ ಕೋರ್ಸ್ ರಸ್ತೆ, ಬೆಂಗಳೂರು.

- 6 -

16) ಜಂಟಿ ನಿರ್ದೇಶಕರು(ಯೋಜನೆ), ವಸತಿ ಮತ್ತು ನಗರಾಭಿವೃದ್ಧಿ ಇಲಾಖೆ,ವಿಕಾಸ ಸೌದ,ಬೆಂಗಳೂರು.

17) ಸರ್ಕಾರದ ಉಪ ಕಾರ್ಯದರ್ಶಿ,ಸಿ.ಆ.ಸು.ಇಲಾಖೆ(ಸಚಿವ ಸಂಪುಟ),ವಿಧಾನ ಸೌದ,ಬೆಂಗಳೂರು. (ಪ್ರಕರಣ ಸಂಖ್ಯೆ: ಸಿ: 383/2020, ದಿನಾಂಕ:20.08.2020).

18) ಸರ್ಕಾರದ ಉಪ ಕಾರ್ಯದರ್ಶಿ(ಆ&ಸಂ), ಆರ್ಥಿಕ ಇಲಾಖೆ, ವಿಧಾನ ಸೌದ,ಬೆಂಗಳೂರು.

19) ಆಂತರಿಕ ಆರ್ಥಿಕ ಸಲಹೆಗಾರರು ಹಾಗೂ ಸರ್ಕಾರದ ಉಪ ಕಾರ್ಯದರ್ಶಿ,ವಸತಿ,ನಗರಾಭಿವೃದ್ಧಿ, ಕಾನೂನು ಮತ್ತು ಇ-ಆಡಳಿಡ ಇಲಾಖೆ.

20) ಸರ್ಕಾರದ ಅಧೀನ ಕಾರ್ಯದರ್ಶಿ-1 ರವರು, ವಸತಿ ಇಲಾಖೆ, ವಿಕಾಸ ಸೌದ,ಬೆಂಗಳೂರು- ಈ ಆದೇಶವನ್ನು ಇ-ರಾಜ್ಯಪತ್ರದಲ್ಲಿ ಕೂಡಲೇ ಪ್ರಕಟಿಸಲು ಅಗತ್ಯ ಕ್ರಮ ವಹಿಸಲು ಕೋರಿದೆ.

21) ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ(ವೆಚ್ಚ 7 & 8)/ವೆಚ್ಚ-9),ವಿಧಾನ ಸೌದ.

22) ಸರ್ಕಾರದ ಮುಖ್ಯ ಕಾರ್ಯದರ್ಶಿರವರು ಆಪ್ತ ಕಾರ್ಯದರ್ಶಿ, ವಿಧಾನ ಸೌದ,ಬೆಂಗಳೂರು.

23) ಮಾನ್ಯ ವಸತಿ ಸಚಿವರ ಆಪ್ತ ಕಾರ್ಯದರ್ಶಿ, ವಿಕಾಸ ಸೌದ, ಬೆಂಗಳೂರು.

24) ಮಾನ್ಯ ನಗರಾಭಿವೃದ್ಧಿ ಸಚಿವರ ಆಪ್ತ ಕಾರ್ಯದರ್ಶಿ, ವಿಧಾನ ಸೌದ, ಬೆಂಗಳೂರು.

25) ಮಾನ್ಯ ತೋಟಗಾರಿಕೆ ಮತ್ತು ರೇಷ್ಮೆ ಹಾಗೂ ಪೌರಾಡಳಿತ ಸಚಿವರ ಆಪ್ತ ಕಾರ್ಯದರ್ಶಿ,ವಿಧಾನ ಸೌದ.

26) ಸರ್ಕಾರದ ಕಾರ್ಯದರ್ಶಿರವರ ಆಪ್ತ ಕಾರ್ಯದರ್ಶಿ, ವಸತಿ ಇಲಾಖೆ.

27) ಸರ್ಕಾರದ ಉಪ ಕಾರ್ಯದರ್ಶಿರವರ ಆಪ್ತ ಸಹಾಯಕರು, ವಸತಿ ಇಲಾಖೆ.

28) ಶಾಖಾ ರಕ್ಷ ಕಡತ/ಹೆಚ್ಚುವರಿ ಪ್ರತಿಗಳು.

**ಕರ್ನಾಟಕ ಸರ್ಕಾರ**

ಸಂಖ್ಯೆ: ವಇ 17 ಎಸ್‌ಬಿಎಂ 2021

ಕರ್ನಾಟಕ ಸರ್ಕಾರದ ಸಚಿವಾಲಯ
ವಿಕಾಸಸೌಧ.
ಬೆಂಗಳೂರು, ದಿನಾಂಕ:29.01.2021

07 Stool 01/2/2021

ಇಂದ:

ಸರ್ಕಾರದ ಕಾರ್ಯದರ್ಶಿ,
ವಸತಿ ಇಲಾಖೆ
ಬೆಂಗಳೂರು.

ಇವರಿಗೆ:

ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ
ವಿಧಾನ ಸೌಧ.

ಮಾನ್ಯರೆ,

ವಿಷಯ: ಕರ್ನಾಟಕ ವಿಧಾನ ಸಭೆ ಸದಸ್ಯರಾದ ಶ್ರೀ ಜಮೀರ್ ಅಹಮದ್ ಖಾನ್ ಬಿ.ಝಡ್, ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 294ಕ್ಕೆ ಉತ್ತರ ನೀಡುವ ಬಗ್ಗೆ.

ಉಲ್ಲೇಖ: ಕಾರ್ಯದರ್ಶಿ, ಕರ್ನಾಟಕ ವಿಧಾನ ಸಭೆ, ಪತ್ರ ಸಂಖ್ಯೆ: ಪ್ರಶಾವಿಸ/15ನೇವಿಸ/9ಅ/ಚುಗು-ಚುರ.ಪ್ರಶ್ನೆ/02/2021, ದಿನಾಂಕ:25.01.2021.

ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ಜಮೀರ್ ಅಹಮದ್ ಖಾನ್ ಬಿ.ಝಡ್, ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 294ಕ್ಕೆ, ಮಾನ್ಯ ವಸತಿ ಸಚಿವರು ಉತ್ತರಿಸಿರುವ 350 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,
29/1
(ಮಾಳಪ್ಪ ವೈ ಕನ್ನೂರ)
ಶಾಖಾಧಿಕಾರಿ-2
ವಸತಿ ಇಲಾಖೆ.

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ಜಮೀರ್ ಅಹಮದ್ ಖಾನ್ ಬಿ.ಝಡ್ (ಚಾಮರಾಜಪೇಟೆ) |
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | **294** |
| ಉತ್ತರಿಸಬೇಕಾದ ದಿನಾಂಕ | : | 01.02.2021 |
| ಉತ್ತರಿಸಬೇಕಾದ ಸಚಿವರು | : | ವಸತಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಚಾಮರಾಜಪೇಟೆ ಮತ ಕ್ಷೇತ್ರದ ವ್ಯಾಪ್ತಿಯಲ್ಲಿ ಸುಮಾರು 17 ಕೊಳಚೆ ಪ್ರದೇಶಗಳಿದ್ದು, ಸದರಿ ಕೊಳಚೆ ಪ್ರದೇಶದಲ್ಲಿ ಹಲವಾರು ಕಡುಬಡವ ಕುಟುಂಬಗಳು ಸುಮಾರು ವರ್ಷಗಳಿಂದ ವಾಸಿಸುತ್ತಿದ್ದು, ಇವರುಗಳಿಗೆ ಹಕ್ಕು ಪತ್ರ ನೀಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ.<br><br>ಬೆಂಗಳೂರು ನಗರದ ಚಾಮರಾಜಪೇಟೆ ವಿಧಾನ ಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಯ ಕಾಯಿದೆ ಪ್ರಕಾರ 12 ಘೋಷಿತ ಕೊಳಚೆ ಪ್ರದೇಶಗಳಿರುತ್ತವೆ. |
| (ಆ) | ಬಂದಿದ್ದಲ್ಲಿ, ಹಕ್ಕುಪತ್ರಗಳನ್ನು ನೀಡಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು ? (ಆದೇಶದ ಪ್ರತಿಯೊಂದಿಗೆ ವಿವರ ನೀಡುವುದು) | ಸರ್ಕಾರದ ಆದೇಶ ಸಂಖ್ಯೆ:ವಇ 88 ಎಸ್ ಬಿಎಂ 2020, ದಿನಾಂಕ:26.11.2020 ರಲ್ಲಿ ಸರ್ಕಾರಿ ಹಾಗೂ ನಗರ ಸ್ಥಳೀಯ ಸಂಸ್ಥೆಗಳ ಮಾಲೀಕತ್ವದಲ್ಲಿರುವ ಘೋಷಿತ ಕೊಳಚೆ ಪ್ರದೇಶಗಳ ನಿವಾಸಿಗಳಿಗೆ ಹಕ್ಕು ಪತ್ರವನ್ನು ನೀಡಲು ಆದೇಶವನ್ನು ಹೊರಡಿಸಲಾಗಿದೆ.<br><br>ಸರ್ಕಾರಿ ಹಾಗೂ ನಗರ ಸ್ಥಳೀಯ ಸಂಸ್ಥೆಗಳ ಮಾಲೀಕತ್ವದಲ್ಲಿರುವ ಘೋಷಿತ ಕೊಳಚೆ ಪ್ರದೇಶಗಳ ಜಮೀನನ್ನು ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಗೆ ಹಸ್ತಾಂತರಿಸಲು ನಗರಾಭಿವೃದ್ಧಿ ಇಲಾಖೆಗೆ ದಿನಾಂಕ:07-12-2020 ರಂದು ಪತ್ರವನ್ನು ಬರೆಯಲಾಗಿದೆ. ಮಂಡಳಿಗೆ ಜಮೀನನ್ನು ಹಸ್ತಾಂತರಿಸಿದ ನಂತರ ಸರ್ಕಾರದ ಆದೇಶದಂತೆ ಹಕ್ಕು ಪತ್ರ ನೀಡಲು ಕ್ರಮ ವಹಿಸಲಾಗುವುದು. ಸರ್ಕಾರದ ಆದೇಶದ ಪ್ರತಿಯನ್ನು ಅನುಬಂಧದಲ್ಲಿ ಒದಗಿಸಲಾಗಿದೆ. |

ಸಂಖ್ಯೆ :ವಇ 17 ಎಸ್‌ಬಿಎಂ 2021

**(ವಿ. ಸೋಮಣ್ಣ)**
ವಸತಿ ಸಚಿವರು

File No.DOH/88/SBM/2020-HSD 2-Housing SECRETARIAT

**ಕರ್ನಾಟಕ ಸರ್ಕಾರದ ನಡವಳಿಗಳು**

**ವಿಷಯ:** ರಾಜ್ಯದಾದ್ಯಂತ ಸರ್ಕಾರಿ ಮಾಲೀಕತ್ವದಲ್ಲಿರುವ ಘೋಷಿತ ಕೊಳಚೆ ಪ್ರದೇಶಗಳ ನಿವಾಸಿಗಳಿಗೆ ಹಕ್ಕುಪತ್ರ ವಿತರಿಸಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:**

1) ಸರ್ಕಾರದ ಆದೇಶ ಸಂಖ್ಯೆ:ನಅಇ 122 ಎಂಎನ್‌ಜಿ 2009(ಭಾ), ದಿನಾಂಕ:13.01.2010.
2) ಸರ್ಕಾರದ ಆದೇಶ ಸಂಖ್ಯೆ:ಯುಡಿಡಿ 176 ಸಿಎಸ್‌ಎಸ್ 2010, ದಿನಾಂಕ:24.01.2011.
3) ಸರ್ಕಾರದ ಆದೇಶ ಸಂಖ್ಯೆ:ವಇ 135 ಕೊಮಂಇ 2014, ದಿನಾಂಕ:17.01.2015.
4) ದಿನಾಂಕ:13.07.2015 ರಂದು ನಡೆದ ಸಭಾ ನಡವಳಿ.
5) ದಿನಾಂಕ:13.05.2019 ಮತ್ತು 13.05.2020 ರಂದು ನಡೆದ ಸಭಾ ನಡವಳಿಗಳು.
6) ದಿನಾಂಕ:01.07.2020 ರಂದು ನಡೆದ ಸಭಾ ನಡವಳಿ.
7) ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ ಇವರ ಪತ್ರ ಸಂಖ್ಯೆ:ಕಕೊಅಮ/ಕಂ-1:ಸ.ಕಂ.ಅ/ಹಕ್ಕುಪತ್ರ/2014-15, ದಿನಾಂಕ:24.05.2018, 19.02.2019 ಮತ್ತು 20.05.2020

**ಪ್ರಸ್ತಾವನೆ:**

ಮೇಲೆ ಓದಲಾದ (1) ರ ಆದೇಶದಲ್ಲಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ವ್ಯಾಪ್ತಿಯಲ್ಲಿ ಘೋಷಿತ ಕೊಳಚೆ ಪ್ರದೇಶಗಳಲ್ಲಿನ ಸರ್ಕಾರಿ ಜಮೀನುಗಳಲ್ಲಿ ಅನಧಿಕೃತವಾಗಿ ವಾಸವಾಗಿರುವ ಕೊಳಚೆ ಪ್ರದೇಶದ ನಿವಾಸಿಗಳಿಗೆ 10 ವರ್ಷಗಳ ಮಾರಾಟ ಮತ್ತು ಗುತ್ತಿಗೆ ಕರಾರು ಒಪ್ಪಂದದ ಹಕ್ಕುಪತ್ರಗಳನ್ನು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ವ್ಯಾಪ್ತಿಯಲ್ಲಿ ಘೋಷಿತ ಕೊಳಚೆ ಪ್ರದೇಶಗಳಲ್ಲಿನ ಸರ್ಕಾರಿ ಜಮೀನುಗಳನ್ನು ಕಂದಾಯ ಇಲಾಖೆಯು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಉಚಿತವಾಗಿ ವರ್ಗಾಯಿಸುವುದು, ಕಂದಾಯ ಇಲಾಖೆಯು ಸದರಿ ಸರ್ಕಾರಿ ಜಮೀನುಗಳನ್ನು ವರ್ಗಾಯಿಸಿದ ನಂತರ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯು ಅಂತಹ ಕೊಳಚೆ ಪ್ರದೇಶಗಳ ನಿವಾಸಿಗಳಿಗೆ ಪ್ರತಿ ಚದರ ಮೀಟರಿಗೆ ರೂ.200/-ರಂತೆ ದರವನ್ನು ವಿಧಿಸಿ 10 ವರ್ಷಗಳ ಮಾರಾಟ ಮತ್ತು ಗುತ್ತಿಗೆ ಕರಾರು ಒಪ್ಪಂದದ ಪತ್ರಗಳನ್ನು ನೀಡುವುದು ಮತ್ತು ಸದರಿ ಫಲಾನುಭವಿಗಳು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ವ್ಯಾಪ್ತಿಯಲ್ಲಿ ನಿವೇಶನ/ಮನೆಯನ್ನು ಹೊಂದಿಲ್ಲವೆಂಬುದನ್ನು ಖಚಿತಪಡಿಸಿಕೊಳ್ಳುವ ಷರತ್ತಿಗೊಳಪಟ್ಟು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

ಮೇಲೆ ಓದಲಾದ (2) ರ ಆದೇಶದಲ್ಲಿ ಕೊಳಚೆ ಪ್ರದೇಶಗಳ ನಿವಾಸಿಗಳಿಗೆ ಹಕ್ಕುಪತ್ರಗಳನ್ನು ನೀಡುವುದನ್ನು ತಡೆಹಿಡಿದು Vertical Re-Development of Slums ಮಾದರಿಯಲ್ಲಿ ಮನೆಗಳನ್ನು ನಿರ್ಮಿಸಿ ಕೊಳಚೆ ನಿವಾಸಿಗಳಿಗೆ 15 ವರ್ಷಗಳ ಪರಭಾರೆ ಮಾಡಬಾರದಾಗಿ ಷರತ್ತು ವಿಧಿಸಿ, ಹಂಚಿಕೆ ಮಾಡಿ 15 ವರ್ಷಗಳ ನಂತರ ಷರತ್ತು ಬದ್ಧ ಕ್ರಯಪತ್ರವನ್ನು ನೀಡಲು ಆದೇಶಿಸಲಾಗಿದೆ.

ಮೇಲೆ ಓದಲಾದ (3) ರ ಆದೇಶದಲ್ಲಿ ಕೊಳಚೆ ನಿವಾಸಿಗಳಿಗೆ ಹಕ್ಕುಪತ್ರಗಳನ್ನು ನೀಡುವ ಬಗ್ಗೆ ಒಂದು ತಾತ್ವಿಕವಾದ ನಿಖರವಾದ ಪ್ರಸ್ತಾವನೆಯನ್ನು ರಚಿಸಿ, ವರದಿ ನೀಡಲು ನಿರ್ದೇಶಿಸಿ, ಸರ್ಕಾರದ

